# ಸಿದ್ಧಗಂಗಾ

ಸಂಪುಟ-30. ಸಂಚಿಕೆ 10 ಅಕ್ಟೋಬರ್—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಲ ದೇಶವ ಗೆದ್ದ ಕಾರುಣ್ಯ ಲಿಂಗವೆ
ಹಾಲಾ ಹಲವನು ಕುಡಿದ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

"ನೆಳಲಿಲ್ಲದಾ ಬೆಳಗೆ" ಆಳುಕಿಲ್ಲದ ಶ್ರೀ ಗಿರಿಯೆ
ಅಲೆಯಿಲ್ಲದಾ ಭವ್ಯ ಸಾಗರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಸರಳ ಸಹ್ಯಾದ್ರಿಯೆ ವಿರಳ ಶ್ರೀ ವಿಂಧ್ಯವೆ
ಅರುಹಿನ ಕರ್ಪುರದ ಶ್ರೀ ಗಿರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|
|  |



# ಶ್ರೀವಾಣಿ

## ಕಾಲ ಚಕ್ರ.

ಜಗತ್ತಿನಲ್ಲಿ ಅತ್ಯಂತ ಅಮೂಲ್ಯವಾದ ಐಶ್ವರ್ಯವಿದೆ. ಅದನ್ನು ಸಂಗ್ರಹಿಸುವವರು ಮಾತ್ರ ವಿರಳ. ಆ ಐಶ್ವರ್ಯವೆಂದರೆ ಮತ್ತೇನೂ ಅಲ್ಲ; ಕಾಲ ಕಾಲಚಕ್ರ, ನೇಮಿ ಕ್ರಮದಲ್ಲಿ ಕ್ರಮಿಸುತ್ತಲೇ ಇದೆ. ಅದನ್ನು ಗಮನಿಸುವವರು ಕೆಲವರು ಮಾತ್ರ. ಕಾಲವನ್ನು ಗೆದ್ದವರು ಮಹಾಪುರುಷರು ಮಾತ್ರ. ಉಳಿದವರೆಲ್ಲ ಕಾಲವಶರಾದವರೇ ಆಗಿದ್ದಾರೆ. ಕಾಲವನ್ನು ಗೆಲ್ಲವುದೆಂದರೆ ಧರ್ಮಬದ್ಧವಾಗಿ ಬಾಳುವುದು. ಕಾಲ ಯಾರನ್ನು ಕಾಯುವುದಿಲ್ಲ, ಯಾರಿಗೂ ತಲೆಬಾಗುವುದಿಲ್ಲ, ಕಾಲ ಪಕ್ಷಿ ಹಾರುತ್ತಲೇ ಇರುತ್ತದೆ. ಇರುವಷ್ಟು ಕಾಲ ವ್ಯಕ್ತಿ ಪರಹಿತಕ್ಕಾಗಿ ಜೀವಿಸಿದರೆ ಕಾಲವನ್ನು ಗೆದ್ದಂತಾಗುತ್ತದೆ. ಸ್ವಾರ್ಥಕ್ಕಾಗಿ ಬದುಕುವುದು. ಕಾಲಗರ್ಭದಲ್ಲಿ ಭಸ್ಮವಾಗುವುದೇ ಆಗಿದೆ. ಸ್ವಾರ್ಥದ ತಾಯಿ ಬೇರು ದುರಾಶೆ.

ಹಿಂದೆ ಒಂದು ಕಾಲದಲ್ಲಿ ಮುಂಜ ಎಂಬ ರಾಜನಿದ್ದ ಅವನಿಗೆ ಒಬ್ಬ ಅಣ್ಣನ ಮಗನಿದ್ದ, ಆ ಮಗು ಅತ್ಯಂತ ಜ್ಞಾನಿಯಾಗುತ್ತಾನೆ ಚಕ್ರವರ್ತಿಯಾಗುತ್ತಾನೆ. ಎಂದು ಮಗುವಿನ ಕೈ ನೋಡಿದ ಜ್ಯೋತಿಷ್ಯರೊಬ್ಬರು ಹೇಳಿದರು. ಮುಂಜನಿಗೆ ಬಹಳ ಸಂಕಟವಾಯಿತು. ತನ್ನ ಆಳಿಕೆಯ ನಂತರ ತನ್ನ ಮಗನಿಗೆ ಅಧಿಕಾರ ಸಿಗಬೇಕು ಎಂಬ ದುರಾಶೆಯುಂಟಾಯಿತು. ದುಷ್ಟ ಬುದ್ಧಿಯೂ ಬಂತು. ಅಣ್ಣನ ಮಗುವನ್ನು ಕೊಲ್ಲುವ ವ್ಯವಸ್ಥೆ ಮಾಡಿದ. ಕಟುಕರು ಆ ಮಗುವನ್ನು ಕೊಲ್ಲವುದಕ್ಕಾಗಿ ಕಾಡಿಗೆ ಎತ್ತಿಕೊಂಡು ಹೋದರು. ಆದರೆ ಮಗುವಿನ ಮುಖವನ್ನು ನೋಡಿದಾಗ ಅವರಿಗೂ ತುಂಬಾ ಕರುಣೆಯುಂಟಾಯಿತು. ಮಗುವನ್ನು ಕೊಲ್ಲಲಾರದೆ ಹೋದರು. ಕೊಂದದ್ದರ ಗುರತಾಗಿ ಏನನ್ನಾದರೂ ತೆಗೆದುಕೊಂಡು ಹೋಗಬೇಕಾಗಿತ್ತು. ಮಗುವಿನ ಕಾಲಿನಲ್ಲಿದ್ದ ಆರನೆಯ ಬೆರಳನ್ನು ಕತ್ತರಿಸಿಕೊಂಡರು. ಹೊರಡುವ ಮುನ್ನ ಮಗುವನ್ನು ಕೇಳಿದರು "ನಿಮ್ಮ ಚಿಕ್ಕಪ್ಪನಿಗೆ ಏನಾದರೂ ಹೇಳುವುದಿದೆಯೇ?"

ಎಂದರು. ಆಗ ಆ ಮಗು ಒಂದು ಚೀಟಿಕೊಟ್ಟಿತು. ಅದನ್ನು ತಂದು ರಾಜ ಮುಂಜನಿಗೆ ಕಟುಕರು ಕೊಟ್ಟು ಹೇಳಿದರು. ಮಗುವನ್ನು ಕೊಂದೆವೆಂದು ತಂದ ಗುರುತು ತೋರಿಸಿದರು. ಮುಂಜ ಮಗುಕೊಟ್ಟ ಚೀಟಿ ತೆಗೆದುನೋಡಿದ.

"ಮಾಂಧಾತಾ ಚ ಮಹೀಪತಿಃ ಕೃತಯುಗಾಲಂಕಾರ ಭೂತೋಗತಃ
ಸೇತುರ್ಯೇನ ಮಹೋದಧೌ ವಿಂಚಿತಾ ಕ್ವಾಸೌ ದಶಾಸ್ಯಾಂತಕಃ
ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯಃ ಯಾತಾದಿವಂ ಭೂಪತೇ
ನೈಕೇನಾಪಿ ಸಮಂಗತಾ ವಸುಮತೀ ಮುಂಜತ್ವಯಾ ಯಾಸ್ಯತಿ

ಕೃತಯುಗಾಲಂಕಾರ ಪ್ರಾಯನಾದ ಮಾಂಧಾತ ಮಹಾರಾಜ ಹೋದ, ತ್ರೇತಾಯುಗದಲ್ಲಿ ಮಹಾಸಾಗರಕ್ಕೇ ಸೇತುವೆ ನಿರ್ಮಿಸಿ ರಾವಣನನ್ನು ಜಯಿಸಿದ ಆ ಮಹಾನುಭಾವ ರಾಮನೆಲ್ಲಿ ? ದ್ವಾಪರ ಯುಗದಲ್ಲಿ ಮಹಿಯನ್ನಾಳಿದ ಧರ್ಮ ಮುಂತಾದ ರಾಜರು ಸ್ವರ್ಗಕ್ಕೆ ಹೋಗಿಯೆ ಬಿಟ್ಟರು! ಕಲಿಯುಗದಲ್ಲಿ ಆಳುತ್ತಿರುವ ಮುಂಜನೆ ನೀನು ಮಾತ್ರ ಅವರಂತೆ ಈ ಭೂಮಂಡಲವನ್ನಿಲ್ಲಿಯೆ ಬಿಟ್ಟು ಹೋಗಲಾರೆ ಅಲ್ಲವೇ ?" ಎಂದು ಬರೆದಿರುವುದನ್ನು ಓದಿದ. ತಕ್ಷಣವೇ ದುಃಖ ಉಮ್ಮಳಿಸಿ ಬಂತು. ಎಂಥ ಅಪರಾಧ ಮಾಡಿದೆ. ದುರಾಶೆಯಿಂದ ಜ್ಞಾನಿಯಾದ ಮಗುವನ್ನು ಕೊಲ್ಲಿಸಿದೆನಲ್ಲಾ ಎಂದು ಮಮ್ಮಲ ಮರುಗಿದ. ಕಟುಕರನ್ನು "ಮಗುವನ್ನು ಎಲ್ಲಿ ಕೊಂದಿರಿ ?" ಎಂದು ಕೇಳಿದ. ಕಟುಕರು ನಿಜಸಂಗತಿ ತಿಳಿಸಿದರು. ಮುಂಜ ಮಗುವನ್ನು ಹಿಂದಕ್ಕೆ ಕರೆಸಿಕೊಂಡು ಹೇಳಿದ "ಅಪ್ಪಾ ಮಗು, ನೀನು ಮಹಾಜ್ಞಾನಿಯಾಗಿದ್ದೀಯ. ನಿನ್ನಂಥವನ ಕೈಗೆ ರಾಜ್ಯ ಬರಬೇಕು. ಅದರಿಂದ ಲೋಕ ಕಲ್ಯಾಣವಾಗುತ್ತದೆ. ನನ್ನಂಥ ಪಾಪಿಯ ಕೈಗೆ ರಾಜ್ಯ ಬರಬಾರದು ಅದರಿಂದ ಲೋಕಕಂಟಕವಾಗುತ್ತದೆ" ಎಂದು ಕಣ್ಣೀರು ಸುರಿಸಿದರು. ಮಗುಹೇಳಿತು "ಚಿಕ್ಕಪ್ಪಾ, ಯಾರೂ ಇಲ್ಲಿ ಶಾಶ್ವತರಲ್ಲ. ನಾಲ್ಕು ದಿನ ಇದ್ದು ಹೋಗುವವರೇ ಅದಕ್ಕಾಗಿ ಇರುವಷ್ಟು ದಿನ ಪರೋಪಕಾರಿಯಾಗಿರಬೇಕು. ಏಕೆಂದರೆ ಕಾಲಚಕ್ರಯಾರನ್ನು ಕೇಳುವುದಿಲ್ಲ" ಮುಂಜ ಮಗುವನ್ನು ತಬ್ಬಿಕೊಂಡ,

ಆದ್ದರಿಂದ ಪರಹಿತದಲ್ಲಿ ಪರಮಾತ್ಮನನ್ನು ಕಾಣಬೇಕು.

[ದಿನಾಂಕ 11.8.94 ರಂದು ಹುಲ್ಕುಂಟಿಯಲ್ಲಿ ಶಿವಾನುಭವಗೋಷ್ಠಿಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ.]

## ಶ್ರೀ ಸಿದ್ಧಲಿಂಗೇಶ್ವರ ವಚನ

ಭೂಲೋಕದಲ್ಲಿ ಕುಳ್ಳಿರ್ದು ಆಕಾಶದ ಸುದ್ದಿಯ ನುಡಿದರೆ
ಆಕಾಶದ ನೆಲೆ ಬಲ್ಲರೆ ಅಯ್ಯಾ ?
ಪಾತಾಳ ಲೋಕದಲ್ಲಿದ್ದವರು ಕೈಲಾಸದ ಸುದ್ದಿಯ ನುಡಿದರೆ
ಕಂಡಂತೆ ಆಗಬಲ್ಲುದೆ ಅಯ್ಯಾ ?
ತತ್ವಶಾಸ್ತ್ರವ ನೋಡಿ ತತ್ವಮಸ್ಯಾಧಿಕ್ಯವ ತಿಳಿದು
ತತ್ವಮಸಿಯಾಹೆನೆಂಬವರೆಲ್ಲಾ ಎತ್ತ ಹೋದರೊ ?
ವ್ಯರ್ಥವಾಗಿ ಸತ್ತು ಹೋದರಲ್ಲಾ !
ಇದು ಕಾರಣ ನಿಮ್ಮ ಶರಣರು
ಉತ್ಪತ್ತಿ ಸ್ಥಿತಿ ಪ್ರಳಯರಹಿತವಾದ ಮಹಾಲಿಂಗದಲ್ಲಿ
ಸಂಯೋಗವಾದ ಅಚ್ಚ ಲಿಂಗೈಕ್ಯರಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ಭೂ ಲೋಕದಲ್ಲಿದ್ದವರು ಆಕಾಶದ ಸುದ್ದಿಯನ್ನು ಮಾತಾಡಹತ್ತಿದರೆ ಅವ-ರೆಂದಾದರೂ ಆಕಾಶದ ನೆಲೆಯನ್ನು ತಿಳಿಯಬಲ್ಲರೆ? ಪಾತಾಳ ಲೋಕದಲ್ಲಿದ್ದವರು ಕೈಲಾಸದ ಸುದ್ದಿಯನ್ನು ಮಾತಾಡಹತ್ತಿದರೆ ಅವರೆಂದಾದರೂ ಕೈಲಾಸವನ್ನು ಕಾಣಬಹುದೋ ? ತತ್ವಶಾಸ್ತ್ರವನ್ನು ಓದಿಕೊಂಡು ಕೇವಲ ತತ್ವಮಸ್ಯಾದಿ ಮಹಾಕಾವ್ಯಗಳ ಅರ್ಥವನ್ನು ಹೇಳುತ್ತ ಕುಳಿತರೆ ಅವರೆಂದಾದರೂ ಆ ಮಹಾವಾಕ್ಯದ ಪ್ರಕಾಶ ಸಾಮರಸ್ಯದ ಸುಖವನ್ನು ಅನುಭವಿಸ ಬಲ್ಲರೊ ? ಅಂತಯೇ ಶರಣರು ಸುಮ್ಮನೆ ಮಾತಾಡುವಲ್ಲಿ ವ್ಯರ್ಥಕಾಲ ಹರಣ ಮಾಡದೆ ತತ್ವಜ್ಞಾನವನ್ನು ಆಚರಣೆಯಲ್ಲಿ ತಂದು ಮಹಾಲಿಂಗದಲ್ಲಿ ಸಮರಸವನ್ನು ಹೊಂದುವರು. ಜೀವನದ ಸಾಫಲ್ಯಕ್ಕಾಗಿ ಯಾವುದರ ಅವಶ್ಯಕತೆಯು ಎಷ್ಟು ಇರುವುದೋ ಅದನ್ನು ಅಷ್ಟು ಗೌರವಿಸಿ ಅವರೊಡನೆ ಒಂದಾಗುವ ಶರಣರು ನಿಜವಾಗಿಯೂ ಶ್ರೇಷ್ಠರು,

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ- ಶ್ರೀ ತೋ. ಸಿ. ಕೈ. ಸೇ. ಸಂಘ, ಎಡೆಯೂರು ಗದಗ)

**ಸಿದ್ಧಗಂಗಾ ಮಾಸ ಪತ್ರಿಕೆ**

**ಸಂಪಾದಕ ಮಂಡಳಿ :**

ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು.

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

ಎಂ. ರೇಣುಕಾರಾಧ್ಯ
ಸಹ ಸಂಪಾದಕರು

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

**ಸಲಹಾಸಮಿತಿ :**

ಡಾ|| ಎಂ. ಎನ್. ಚನ್ನಬಸಪ್ಪ
ಡಾ|| ಹೆಚ್. ತಿಪ್ಪೇರುದ್ರಸ್ವಾಮಿಗಳು
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ
ಮುದ್ರಕರು.

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ.

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು ",
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

**ಚಂದಾ ದರ**

ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಸಂಪಾದಕೀಯ

## ಡಾ|| ಸಿದ್ದಯ್ಯ ಪುರಾಣಿಕರು

ಹ.ಟ್ಟಿದ್ದು ದ್ಯಾಂಪುರ, ರಾಯಚೂರು ಜಿಲ್ಲೆ, ಯಲಬುರ್ಗಿ ತಾಲ್ಲೂಕು,. ದಿನಾಂಕ 18-6-1918 ಲಿಂಗೈಕ್ಯರಾದದ್ದು 4-9-1994 ರಂದು ಬೆಂಗಳೂರಿನಲ್ಲಿ ಏಳು ದಶಕಕ್ಕೂ ಹೆಚ್ಚಿನ ಸಾರ್ಥಕ ಬದುಕು. ಬಡಕುಟುಂಬದ ಪರಿಸರ. ವಿದ್ಯೆ ಕಲಿಯಬೇಕೆಂಬ ಹಂಬಲ. ಬಾಲ್ಯದಲ್ಲಿಯೇ ಅದಕ್ಕಾಗಿ ಸಂಕಲ್ಪ. ಸಾಧನೆಯ ಶಿವಪಥ ಕ್ರಮಣ. ಪರಿಣಾಮವಾಗಿ ಐ. ಎ. ಎಸ್. ಪದವೀಧರ, ಅಷ್ಟೆ ಅಲ್ಲ ಪಂಚ ಭಾಷಾ ಪಾಂಡಿತ್ಯ. ಉರ್ದು, ಹಿಂದಿ, ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆ ಹಾಗೂ ಸಾಹಿತ್ಯಗಳಲ್ಲಿ ವಿದ್ವಾಂಸ.

1943 ರಲ್ಲಿ ಸೇವಾ ಜೀವನದ ಆರಂಭ. ಕಂದಾಯ ಇಲಾಖೆಯಲ್ಲಿ ತಹಸಿಲ್ದಾರ. ಹಂತ ಹಂತವಾಗಿ ವಿವಿಧ ಹುದ್ದೆಗಳಲ್ಲಿ ಸೇವಾ ದೀಕ್ಷೆ. ಕಾರ್ಮಿಕ ಆಯುಕ್ತರಾಗಿ ನಿವೃತ್ತ- ಸೇವಾವಧಿ ಕಾವ್ಯಜೀವನದೊಡನೆ ಸಂಗಮ. ಪುರಾಣಿಕರ ಸೇವೆ ಸ್ಮರಣೀಯವೆನಿಸಿತು-

ಕನ್ನಡದ ಬಗ್ಗೆ ಮಾಹೇಶ್ವರ ನಿಷ್ಠೆ. ಹೈದರಾಬಾದ್ ಕರ್ನಾಟಕದಿಂದ ಬಂದ ಪುರಾಣಿಕರದು ದುಡಿಮೆಯ ಪ್ರವೃತ್ತಿ—ಅದೂ ಕನ್ನಡಕ್ಕಾಗಿ, ಕನ್ನಡಿಗರ ಸಮಸ್ಯೆಗಳಿಗಾಗಿ " ಕರ್ನಾಟಕವು ಕನ್ನಡಿಗರ ನಿರ್ಲಕ್ಷ್ಯದಿಂದ, ಕನ್ನಡ ನಾಯಕರ ನಪುಂಸಕತೆಯಿಂದ ನೆರೆಹೊರೆಯ ಭಾಷೆಗಳ ಬಕಾಸುರತೆಯಿಂದ ಕಳೆದುಕೊಂಡ ಭಾಗಗಳಿಗೆ ಲೆಕ್ಕವಿದೆಯೆ ? ಎಂಬ ನೋವು.

ಪುರಾಣಿಕರ ಸಾಹಿತ್ಯ ಸೇವೆ ಗಣನೀಯವಾದುದು ಅವರ ಲೆಕ್ಕಣಿಕೆಯಿಂದ ಅರಳಿದ ಕೃತಿಗಳು -ಜಲಪಾತ, ಕರುಣಾಶ್ರಾವಣ, ಮಾನಸ ಸರೋವರ, ಕಲ್ಲೋಲ ಮಾಲೆ, ಮೊದಲು ಮಾನವನಾಗು, ತುಪ್ಪಾರೊಟ್ಟಿಗೇಗೇಗೇ, ವಿಕಾಸವಾಣಿಗಳು ಕವನ ಸಂಕಲನಗಳು. ಕಥಾಮಂಜರಿ, ತುಷಾರ ಹಾರ, ಕಥಾಸಂಕಲನಗಳು ತ್ರಿಭುವನ ಮಲ್ಲ ಕಾದಂಬರಿ. ಆತ್ಮಾರ್ಪಣ, ರಜತರೇಖೆ, ಭಾರತವೀರ, ನಿರ್ಬಂಧನ ನಾಟಕಗಗಳು. ಶರಣಚರಿತಾಮೃತ, ಸಿದ್ಧರಾಮ, ಬಸವಣ್ಣನವರ ಜೀವನ ಮತ್ತು ಸಂದೇಶ ಚರಿತ್ರೆಗಳು. ವಚನೋದ್ಯಾನ, ವಚನನಂದನ ವಚನ ಸಂಕಲನಗಳು. ಕನ್ನಡ ಪದ್ಯರತ್ನಾಕರ, ಶ್ರೀಕಾರ ಹಾಗೂ ಪ್ರಬಂಧಮಾಲೆ, ಶರಣ ಪ್ರಸಾದ, ಸುಬೋಧಸಾರ, ಮಹಾತ್ಮಕನಕದಾಸ ಪ್ರಶಸ್ತಿ, ಸಿದ್ಧಗಂಗಾ ಶ್ರೀಗಳು ಬೇರೆ ಬೇರೆ ಲೇಖಕರೊಂದಿಗೆ ಸಂಪಾದಿಸಿದ ಕೃತಿಗಳು.

ಶರಣಚರಿತಾಮೃತ ವಿವಿಧ ಆಕರಗಳ ಅಧ್ಯಯನದ ಫಲವಾಗಿ ಮೂಡಿಬಂದ ಶ್ರೇಷ್ಠಕೃತಿ. ಸರಳಗದ್ಯಕ್ಕೆ, ಉತ್ತಮ ಚಿಂತನಕ್ಕೆ ಸ್ಪಷ್ಟ ಉದಾಹರಣೆ- ಜನಮನದ ಕತ್ತಲೆಯನ್ನು ತೊಳೆಯುವ ಶಿವಶರಣರ ಜೀವನ ಚರಿತಾಮೃತ. ಪುರಾಣಿಕರ ಶಿವಚಿಂತನೆಯ ಕೃತಿ.

ವಚನೋದ್ಯಾನ "ಆಳವಾದ ಅನುಭವ, ಪಾಗಿದ ವಿದ್ವತ್ತು. ವಿಸ್ತಾರ' ವನ್ನು ಧ್ವನಿಸುತ್ತಿರುವ ಅನುಭಾವ ಗ್ರಂಥ. ಸ್ವತಂತ್ರಧೀರಸಿದ್ಧೇಶ್ವರನ ಶಿವಾನು

ಭವದ ಪ್ರಸಾದವಾಣಿ ಸಂಪುಟ. 'ಭಿಲ್ವಾರಾ" ಪ್ರಶಸ್ತಿಯನ್ನು ತಂದುಕೊಟ್ಟ ಯಶೋಕೃತಿ ಪುರಾಣಿಕರನ್ನು ಆಧುನಿಕ ವಚನಕಾರನನ್ನಾಗಿಸಿದ ಕೃತಿ. ಶಿಲ್ಪಸೌಂದರ್ಯ' ಪದದ ತಂತ್ರಜ್ಞಾನ, ಶಬ್ದ ಚಮತ್ಕಾರ, ಅನುಭವದ ಆಳಗಳನ್ನು ಎತ್ತಿತೋರಿಸುತ್ತದೆ ವಚನೋದ್ಯಾನ. "ಪುರಾಣಿಕರ ಪ್ರತಿಭೆ ವಚನ ಪ್ರಕಾರಕ್ಕೆ ಹೇಳಿ ಮಾಡಿಸಿದ್ದು" ನಿಜವಾದ ಮಾತು.

ಕನ್ನಡಕ್ಕಾಗಿ ಪುರಾಣಿಕರು ಬಹಳಷ್ಟು ಮಾಡಿದರು. ಮೈಸೂರು ವಿಶ್ವವಿದ್ಯಾಲಯದ ವಿಶ್ವಕೋಶ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟು ಯೋಜನೆಗಳಿಗೆ ದುಡಿದರು. ಸರೋಜಿನಿ ಮಹಿಷಿ ಸಮಿತಿಯ ಸದಸ್ಯರಾಗಿ, ಕನ್ನಡಗಡಿ ಸಮಿತಿಯ ಸದಸ್ಯರಾಗಿ, ಗೋಕಾಕಾ ಚಳುವಳಿಯ ಸಕ್ರಿಯ ಸದಸ್ಯರಾಗಿ, ಸೇವೆಗೈದರು. ಕನ್ನಡಕ್ಕೆ ಅನ್ಯಾಯವಾಗುವುದನ್ನು ಕಂಡಾಗ ಸಾತ್ವಿಕ ಸಿಡಿಲಾಗಿ ಗುಡಿಗಿದರು. ಆಡಳಿತ ಕನ್ನಡ ಸಮಸ್ಯೆ, ಕನ್ನಡ ಕ್ರೈಸ್ತರ ಸಮಸ್ಯೆ, ಕಾವೇರಿ ಕೃಷ್ಣ ಜಲವಿವಾದ, ಕಾರ್ಖಾನೆಗಳ ಕನ್ನಡಿಗರ ಸಮಸ್ಯೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು.

ಅನೇಕ ಪ್ರಶಸ್ತಿ ಮನ್ನಣೆಗಳನ್ನೂ ಪಡೆದರು ಗುಲಬರ್ಗದಲ್ಲಿ ನಡೆದ 58 ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ ಗಳಿಸಿದರು.

ಶ್ರೀ ಸಿದ್ಧಗಂಗಾ ಗುರುಪರಂಪರೆಯಲ್ಲಿ ಅನನ್ಯಭಕ್ತಿಯುಳ್ಳವರಾಗಿದ್ದರು. ಸುವ ರ್ಣಮಹೋತ್ಸವ ಅಭಿನಂದನ ಗ್ರಂಥ ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದರು. ಆ ಬೃಹದ್ಗ್ರಂಥದಲ್ಲಿ ಸಿದ್ಧಗಂಗೆಯ ಶ್ರೀಗಳವರನ್ನು ಕುರಿತು ಪುರಾಣಿಕರು ಬರೆದಿರುವ ಮಾತುಗಳು ಮುತ್ತಿನಂತಿವೆ. ಪೂಜ್ಯರ ಸಮಗ, ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ಶ್ರೀ ಮಠದ ಗ್ರಾಮಾಂತರ ಬಸವಜಯಂತಿ ಯೋಜನೆಯಲ್ಲಿ ಭಕ್ತಿಭಾವ ಪೂರ್ಣರಾಗಿ ಪಾಲ್ಗೊಳ್ಳುತ್ತಿದ್ದರು.

ಡಾ॥ ಸಿದ್ದಯ್ಯ ಪುರಾಣಿಕರ ಅಗಲಿಕೆಯಿಂದ ಕನ್ನಡ ಸಾಹಿತ್ಯ ಸಮಾಜಕ್ಕೆ ತುಂಬಲಾರದ ನಷ್ಟವಾಗಿದೆ. ಅವರಲ್ಲಿ ವಿನಯ, ಶ್ರದ್ಧೆ ವಿವೇಚನೆ, ಸಂಸ್ಕೃತಿ ಸಮಾಧಾನ, ಸಾಧನೆ, ಪ್ರೀತಿ, ಸೌಜನ್ಯಗಳು ಮನೆಮಾಡಿಕೊಂಡಿದ್ದವು. ಚಿತ್ತ ಸ್ವಾಸ್ಥ್ಯವನ್ನು ಜೀವನ ಸ್ವಾರಸ್ಯವನ್ನು ಪೋಷಿಸಿಕೊಂಡು ಬಂದಿದ್ದರು. ಅವರನ್ನು ನೆನಪಿಸಿಕೊಂಡರೆ ಜೀವನಮೌಲ್ಯಗಳಿಂದ ಸದಾ ನಗುತ್ತಿದ್ದ ಹಿರಿಯ ಚೇತನವೊಂದು ಕಣ್ಮರೆಯಾಯಿತಲ್ಲಾ ಎಂದು ನೋವಾಗುತ್ತದೆ. ಆದರೆ ಅವರು ಕಾಪಾಡಿಕೊಂಡು ಬಂದ ವ್ಯಕ್ತಿತ್ವವನ್ನು ಸ್ಮರಿಸುವಾಗ ಆಸೆಯ ಕಿಡಿಗಳನ್ನು ಉಳಿಸುತ್ತದೆ. ಬದುಕಿನಲ್ಲಿ ಭರವಸೆಯನ್ನು ಮೂಡಿಸುತ್ತದೆ,

ಪುರಾಣಿಕರದು "ಜೀವನ ಧರ್ಮ, ಮಾನವಮತ, ಶಿವಪಥವಾಗಿತ್ತು" ಎಂಬ ಹಾ. ಮಾ. ನಾ. ಅವರ ಮಾತು ಅರ್ಥಪೂರ್ಣವುಳ್ಳದ್ದು.
ಡಾ॥ ಸಿದ್ದಯ್ಯ ಪುರಾಣಿಕರಿಗೆ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಕ್ಷೇತ್ರ ವಾರ್ತೆ

—ಹೆಚ್. ಬಿ. ಗಂಗಾಧರಯ್ಯ

## ಶಿಕ್ಷಕರ ದಿನಾಚರಣೆ

20 ಸೆಪ್ಟೆಂಬರ್ 1994 ಮಂಗಳವಾರ ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಶಿಕ್ಷಕರ ದಿನಾಚರಣೆ ಆಚರಿಸಲಾಯಿತು. ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀ ಗಳವರ ಸಾನ್ನಿಧ್ಯದಲ್ಲಿ ಸಮಾರಂಭದ ಅಧ್ಯಕ್ಷತೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಪಿ. ಎಸ್. ರಾಮಾನುಜಂ, ಐ. ಪಿ. ಎಸ್. ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರಾದ ಶ್ರೀ ಎಸ್. ಆರ್. ಸುರೇಶ್, ಐ. ಎ. ಎಸ್ ಆಗಮಿಸಿದ್ದರು.

1993-94 ನೇ ಸಾಲಿನಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಿಂದ ನಿವೃತ್ತರಾದ ಶಿಕ್ಷಕರು ಮತ್ತು ಸಿಬ್ಬಂದಿ ವರ್ಗದವರಿಗೆ ಮಾನ್ಯ ಶ್ರೀ ಎಸ್. ಆರ್. ಸುರೇಶ್ ಶಾಲು ಹೊದಿಸಿ ಸನ್ಮಾನಿಸಿ ಮಾತನಾಡಿದರು. ಶ್ರೀ ಮಠಕ್ಕೆ ಇದೇ ನನ್ನ ಪ್ರಥಮ ಭೇಟಿ. ಇಲ್ಲಿ ದೈವಾಂಶವಿದೆ. ಶ್ರೀ ಮಠ ಆಧ್ಯಾತ್ಮಿಕ ಕೇಂದ್ರವಾಗಿದೆ. ಪೂಜ್ಯ ಶ್ರೀ ಶ್ರೀಗಳು ದೊಡ್ಡ ತತ್ವಜ್ಞಾನಿಗಳಾಗಿದ್ದಾರೆ. ಆಧ್ಯಾತ್ಮಿಕತೆ ಮತ್ತು ಮತಧರ್ಮ ಎರಡೂ ಇಲ್ಲಿ ಸಮಗ್ರತೆ ಹೊಂದಿವೆ. ಇದರ ಪರಿಣಾಮವಾಗಿ ಭಾರತೀಯ ಸಂಸ್ಕೃತಿಯ ಬೆಳಕು ಇಲ್ಲಿ ಪ್ರತಿ ಬಿಂಬಿಸಿ ಪ್ರಕಾಶಿಸುತ್ತಿದೆ.

ಪ್ರಸ್ತುತ ಆರ್ಥಿಕ ಪ್ರಗತಿಯೇ ಜೀವನದ ಗುರಿಯಾಗಿದೆ, ಅಂದರೆ ಹಣಗಳಿಕೆಯೇ ಪ್ರಧಾನವಾಗಿದೆ. ಪುರಾತನ ಸಂಸ್ಕೃತಿ ಹೀಗಿರಲಿಲ್ಲ. ಅಲ್ಲಿ ಇಲ್ಲಿ ಸ್ವಲ್ಪ ಮಳೆಯಾಗುತ್ತಿರುವುದು ಪೂಜ್ಯ ಶ್ರೀ ಶ್ರೀ ಗಳವರಂಥಹ ಮಹಾನ್ ಶ್ರೇಷ್ಠ ಸಾಧಕರೆ ಕಾರಣ. ಶ್ರೀ ಶ್ರೀ ಗಳ ವಜ್ರಮಹೋತ್ಸವ ಸ್ಮರಣಾರ್ಹವಾಗಿ 5 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸುತ್ತಿರುವ ಬೃಹತ್ ಆಧುನಿಕ ಸುಂದರ ವಿದ್ಯಾರ್ಥಿ ನಿಲಯ ಮತ್ತು ಬೃಹತ್ ಪ್ರಸಾದ ನಿಲಯ ಕಟ್ಟಡಗಳು ಸಹಸ್ರ ಸಹಸ್ರ ವರ್ಷಗಳ ಕಾಲ ಅವರ ಅನುಪಮ/ಅದ್ವಿತೀಯ ಸಾಧನೆಯನ್ನು ಜಗತ್ತಿಗೆ ಹೇಳುತ್ತವೆ. ಇವುಗಳ ದರ್ಶನದಿಂದ ಮುಂದಿನ ಪೀಳಿಗೆ ಸ್ಫೂರ್ತಿ ಪಡೆದು ಉದಾತ್ತಗೊಳಿಸಿಕೊಳ್ಳುವುದು.

ಧರ್ಮ ಮತ್ತು ಶೀಲ ಶಿಕ್ಷಣಕ್ಕೆ ಆಧಾರ ಹೊಸ ಹೊಸ ಅನುಭವಗಳನ್ನು ತಿಳಿಯಲು ಶಿಕ್ಷಕರು ಕುತೂಹಲ ಉಳ್ಳವರಾಗಬೇಕು. ತ್ಯಾಗ ಮನೋಭಾವದಿಂದ ತಮ್ಮ ಕರ್ತವ್ಯ ನಿರ್ವಹಿಸಬೇಕು. ಶಿಕ್ಷಣ ಆಧ್ಯಾತ್ಮಿಕ ಪ್ರಜ್ಞೆ. ಪ್ರಜ್ಞಾವಂತ

ಬುದ್ಧಿಶಾಲಿಗಳಾಗಲು ಪ್ರಾಮಾಣಿಕವಾಗಿ ನಿರಂತರವಾಗಿ ಶ್ರಮಿಸಬೇಕು ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ.ಎಸ್. ರಾಮಾನುಜಂ ಮಾತನಾಡುತ್ತಾ ಶ್ರೀಮಠ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಂದ ಕೂಡಿ ಏಕತೆ ಮತ್ತು ಐಕ್ಯತೆಯ ಸಂದೇಶವನ್ನು ಸಾರುತ್ತಿರುವುದು ಸಂತೋಷವನ್ನುಂಟು ಮಾಡಿದೆ. ಇದು ಧಾರ್ಮಿಕ ನೈತಿಕತೆಯ ಕೇಂದ್ರವಾಗಿದೆ. ಹಿಂದೆ ವಿದ್ಯಾಭ್ಯಾಸಕ್ಕೆ ಹೆಚ್ಚು ಪ್ರಯಾಸವಿತ್ತು. ಅನುಕೂಲಗಳು ಕಡಿಮೆ. ಈಗ ಸೌಲಭ್ಯಗಳು ಜಾಸ್ತಿಯಾಗಿವೆ. ಶ್ರೀ ಶ್ರೀಗಳವರು ತಮ್ಮ ಜೀವನವನ್ನೆಲ್ಲಾ ವಿದ್ಯಾ ಪ್ರಸಾರಕ್ಕಾಗಿ ಶ್ರೀಗಂಧದ ಕೊರಡಿನಂತೆ ಸವೆಸುತ್ತಿದ್ದಾರೆ. ಅವರ ಜೀವನ ದರ್ಶನ ಅರಿಯುವ ದೂರದರ್ಶಿತ್ವವಿರಬೇಕು. ವಿದ್ಯಾರ್ಥಿಗಳ, ಶಿಕ್ಷಕರ ಗುರಿ/ಲಕ್ಷ್ಯ ಸ್ಥಿರವಾಗಿದ್ದು ವಿಕರ್ಷಣೆಯಿಂದ ಕೂಡಿರಬಾರದು ನಮ್ಮ ಭಾರತ ಜ್ಞಾನ-ಸಂಪತ್ತಿಗೆ ಹೆಸರಾಗಿದೆ ಜ್ಞಾನ ಬೆಳವಣಿಗೆಗೆ ಪ್ರಾಧಾನ್ಯತೆ ನೀಡಿ ರಕ್ಷಿಸಿಕೊಳ್ಳಬೇಕು. ವಿದ್ಯಾರ್ಜನೆಗೆ ಕ್ಷಣ ಕ್ಷಣವೂ ಮುಖ್ಯ. ಹಣಗಳಿಕೆಗೆ ಒಂದೊಂದು ಪೈಸೆಯೂ ಮುಖ್ಯ. ಬೋಧಕರನ್ನು ಐದು ವರ್ಗಗಳಾಗಿ ವಿಂಗಡಿಸಬಹುದು.

1 **ಶಿಕ್ಷಕ** :- ವಿದ್ಯಾರ್ಥಿಗಳಿಗೆ ಶಿಕ್ಷೆ ನೀಡುವ ವ್ಯಕ್ತಿತ್ವ. ಪ್ರವೃತ್ತಿವುಳ್ಳವರು.

2 **ಅಧ್ಯಾಪಕ** :- ಕೇವಲ ಶಾಲಾ ನಿಯಮಗಳನ್ನು ಯಾಂತ್ರಿಕವಾಗಿ ಅನುಸರಿಸುವುದು.

3 **ಉಪಾಧ್ಯಾಯ**-: ಉಪ ಎಂದರೆ ಹತ್ತಿರ/ಸಮೀಪ, ಉಪನಿಷತ್ತು ಉಪಹಾರ, ಉಪಕಾರ, ಅಂತರಂಗ ಮತ್ತು ಉಪಯೋಗ ಎಂಬ ಅರ್ಥ ನಿರೂಪಿಸುತ್ತದೆ. ವಿದ್ಯಾರ್ಥಿಗಳ ಬಹಿರಂಗಗಳನ್ನು ಅರಿತು ಸಮೀಪವರ್ತಿಯಾಗಿ ಮಧುರ ಬಾಂಧವ್ಯದಿಂದ ಮಾರ್ಗದರ್ಶನ ಮಾಡುವುದು.

**ಆಚಾರ್ಯ**:- ಮೌಲ್ಯಾಧಾರಿತ ವ್ಯಕ್ತಿತ್ವವನ್ನು ಆಚರಿಸಿ ತೋರಿಸುವವ ಆಚಾರ್ಯ ಉತ್ತಮ ವ್ಯಕ್ತಿತ್ವ ಮೊದಲು ನಡೆ-ನುಡಿಯ ಸಾಮರಸ್ಯದ ವ್ಯಕ್ತಿತ್ವವನ್ನು ನಿರೂಪಿಸಲು ತಾನು ಆಚರಿಸುವುದರ ಮೂಲಕ ವಿದ್ಯಾರ್ಥಿಗಳ ಮೇಲೆ ಯೋಗ್ಯ ಪ್ರಭಾವ ಬೀರಬೇಕು.

5 **ಗುರು** :- ಅಂಧಕಾರ/ಅಜ್ಞಾನ ಹೋಗಲಾಡಿಸುವವ. ಇವುಗಳಲ್ಲಿ 3, 4 ಮತ್ತು 5 ನೇ ವರ್ಗಗಳು ಶ್ರೇಷ್ಠದರ್ಜೆಗಳಾಗಿವೆ.

ವಿದ್ಯೆಯಿಂದ ಶಿಸ್ತು ಮೂಡಬೇಕು. ತೇಜಸ್ವಿ ಶಿಕ್ಷಕರಾಗಿ ದೇಶ ಮುನ್ನಡೆಸಬೇಕು. ನಂಬಿಕೆ-ಶ್ರದ್ಧೆ ಉಳ್ಳವರಾಗಿದ್ದರೆ ದೇವರು ಯಾವಾಗಲೂ ನಮ್ಮ ಜೊತೆಯಲ್ಲಿದ್ದು ಸಲಹುತ್ತಾನೆ, ಎಂದು ನುಡಿದರು.

**ಶ್ರೀ ಶ್ರೀ ಗಳ ಆಶೀರ್ವಚನ** :- ಇಂದು ಜಗತ್ತು ಶಾಂತಿ ಸಾಗರವಾಗಿಲ್ಲ. ಸಾಮಾಜಿಕ ಜೀವನ ದುರ್ಭರವಾಗಿದೆ. ದೇಶಕ್ಕೆ ದುರಂತ ಒದಗಿ ಅಪಾಯದ ಅಂಚಿನಲ್ಲಿದೆ. ಇದರಿಂದ ಪಾರಾಗಲು ತಾಯಿ ಮತ್ತು ಶಿಕ್ಷಕರ ಜವಾಬ್ದಾರಿ ಮಹತ್ತರವಾಗಿದೆ. ಆದ್ದರಿಂದಲೇ ನಮ್ಮ ಭಾರತದ ರಾಷ್ಟ್ರಪತಿಗಳಾದ ರಾಧಾಕೃಷ್ಣ ತಮ್ಮ ಹುಟ್ಟು-ಹಬ್ಬವನ್ನು ಶಿಕ್ಷಕರ ಹೆಸರಿನಲ್ಲಿ ಆಚರಿಸುವಂತೆ ಕರೆನೀಡಿದ್ದು. ಇದು ಅವರ ದೂರ-ದರ್ಶಿತ್ವ ಮತ್ತು ಶಿಕ್ಷಕರ ವ್ಯಕ್ತಿತ್ವ ಮತ್ತು ಜವಾಬ್ದಾರಿಯನ್ನು ನಿರೂಪಿಸುತ್ತದೆ. ಆದರ್ಶ ಭಾರತೀಯರಾಗಿ ವಿದ್ಯಾರ್ಥಿಗಳನ್ನು ರೂಪಿಸುವಲ್ಲಿ ಶಿಕ್ಷಕರ ಪಾತ್ರ ಮಹತ್ತರವಾದದು.

ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆಯಾದ ನಂತರ ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಸ್ವಾಗತಿಸಿದರು. ಶ್ರೀ ಹೆಚ್.ಎಸ್. ನೀಲಕಂಠಯ್ಯ ವಂದಿಸಿದರು. ಶ್ರೀ ಎಸ್. ಶಿವಕುಮಾರ್ ಕಾರ್ಯಕ್ರಮ ನಿರೂಪಿಸಿದರು.

## ಗಾಂಧಿ ಜಯಂತಿ

ಅಕ್ಟೋಬರ್ 2, 1994 125ನೇ ಗಾಂಧಿ ಜಯಂತಿಯನ್ನು ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಆಚರಿಸಲಾಯಿತು. ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಸಮಾರಂಭದ ದಿವ್ಯ ಸಾನಿಧ್ಯ ವಹಿಸಿದ್ದರು. ತುಮಕೂರು ಹೇಮಾವತಿ ನಾಲಾ ವಲಯದ ಮುಖ್ಯ ಇಂಜಿನಿಯರ್ ಶ್ರೀ ಜಿ. ಎಂ. ರತ್ನಾಕರ ನಾಯಕ್ ಅಧ್ಯಕ್ಷತೆ ವಹಿಸಿದ್ದರು. ಸುಪ್ರಸಿದ್ಧ ಕವಿಗಳು, ತುಮಕೂರು ಮಾಜಿ ನಗರ ಸಭಾಧ್ಯಕ್ಷರಾದ ಶ್ರೀ ವಿ. ಚಿಕ್ಕವೀರಯ್ಯನವರು ಉಪನ್ಯಾಸ ನೀಡಿ ಅಹಿಂಸಾ ಮಾರ್ಗದಲ್ಲಿ ಸತ್ಯಾಗ್ರಹದ ಮೂಲಕ ಗಾಂಧೀಜಿಯವರ ನಾಯಕತ್ವದಿಂದ ಸ್ವಾತಂತ್ರ್ಯ ಲಭಿಸಿತು. ಕಾಂಗ್ರೆಸ್ ಪಕ್ಷಕ್ಕೆ ಚೇತನ ನೀಡಿ ದೇಶದ ಸಾಮಾನ್ಯ ಜನ ಸಮುದಾಯವನ್ನು ಆಕರ್ಷಿಸಿದರು. 125 ವರ್ಷಗಳಾದರೂ ಗಾಂಧೀಜಿಯವರನ್ನು ಸ್ಮರಿಸುತ್ತಿದ್ದೇವೆ. ಕಾರಣ ಅವರ ತ್ಯಾಗ, ಸರಳತೆ, ಸಮತಾಭಾವ, ದೇಶಪ್ರೇಮ ವಿಶ್ವಬಾಂಧವ್ಯ ಅದ್ಭುತ ಸಾಧನೆ ಮುಂತಾದ ಮೌಲ್ಯಗಳನ್ನು ಬದುಕಿನಲ್ಲಿ ಕಾಣಬಹುದಾಗಿತ್ತು, ಆದ್ದರಿಂದಲೇ ಗಾಂಧೀಜಿ ಮಹಾಮಾನವತವಾದಿಯಾಗಿ ಪ್ರಖ್ಯಾತರಾಗಿದ್ದಾರೆಎಂದರು.

ಶ್ರೀ ಜಿ. ಎಂ ರತ್ನಾನಾಯಕ್ ಮಾತನಾಡಿ ಸ್ವಾತಂತ್ರ್ಯಾನಂತರ ರಾಷ್ಟ್ರದ ಬೆಳವಣಿಗೆಯಾಗಿದೆ, ಆದರೆ ಮಾಡಬೇಕಾದುದು ಸಾಕಷ್ಟು ಇದೆ. ದೇಶದ ಬಗ್ಗೆ

ಚಿಂತನೆ ಮಾಡಬೇಕು. ಪ್ರತಿ ವ್ಯಕ್ತಿ ತಮ್ಮ ತಮ್ಮ ಸ್ಥಾನಗಳಲ್ಲಿ ನಿಸ್ವಾರ್ಥದಿಂದ ಕೆಲಸ ಮಾಡಿದರೆ ದೇವರು ನಮಗೆ ಸುಖ, ಆನಂದ ಮತ್ತು ಫಲನೀಡುತ್ತಾನೆ ಈ ನಂಬಿಕೆಯ ಪ್ರತಿಪಾದಕರಾಗಿ ಗಾಂಧೀಜಿ ಕಾರ್ಯನಿರ್ವಹಿಸಿದರು. ಮನಸ್ಸನ್ನು ಸ್ವಾಧೀನದಲ್ಲಿಟ್ಟು ಸಾಧನೆ ಮಾಡಿದರೆ ವಿದ್ಯಾರ್ಥಿಗಳಿಗೆ ಒಳ್ಳೆ ಭವಿಷ್ಯವಿದೆ ಎಂದು ನುಡಿದರು.

**ಶ್ರೀ ಶ್ರೀ ಗಳಿಂದ ಆಶೀರ್ವಚನ :–** ಮಹಾತ್ಮರ ಜೀವನದರ್ಶನ ಮತ್ತು ಜೀವನ ಚರಿತ್ರೆಗಳು ನಮ್ಮ ಜೀವನ ಉದಾತ್ತಗೊಳಿಸುತ್ತವೆ. ಸತ್ಯ, ಧರ್ಮ, ಸರಳತೆ, ಅಹಿಂಸೆ ಆಚರಣೆಯಲ್ಲಿ ಬರಬೇಕು. ಗಾಂಧೀಜಿಯ ಉಡುಪು ಸರಳತೆಗೆ ಪ್ರತೀಕವಾಗಿತ್ತು. ಪರಕೀಯರ ಆಡಳಿತದ ವೈಖರಿಯಿಂದ ದೇಶ ಎಷ್ಟು ಬರಡಾಗಿತ್ತು ಎಂಬ ಅಂಶ ಪ್ರತಿಪಾದಿಸುತ್ತಿತ್ತು. ಆದರೆ ಇಂದು ಗಾಂಧೀಜಿ ಮೌಲ್ಯಗಳು ಕುಸಿಯುತ್ತಿವೆ. ಈ ಬಗ್ಗೆ ಭಾರತೀಯರಾದ ನಾವುಗಳು ಚಿಂತನ ಮಾಡಬೇಕಾಗಿದೆ ಎಂದು ಹೇಳಿದರು. ಪ್ರಾರಂಭಕ್ಕೆ ಶ್ರೀ ಬಿ. ಎಸ್. ಮಲ್ಲಿಕಾರ್ಜುನಯ್ಯ ಮತ್ತು ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಶಿಕ್ಷಣಾರ್ಥಿಗಳು ದೇಶಭಕ್ತಿ ಗೀತೆಗಳನ್ನು ಹಾಡಿದರು. ಶ್ರೀ ಎಸ್. ಶಿವ ಕುಮಾರ್ ಸ್ವಾಗತಿಸಿದರು. ಶ್ರೀ ಹೆಚ್. ಎಸ್. ನೀಲಕಂಠಯ್ಯ ವಂದನೆ ಸಲ್ಲಿಸಿದರು. ಶ್ರೀ ಎ. ಎಸ್. ನಂಜಾಮರಿ ಕಾರ್ಯಕ್ರಮ ನಿರೂಪಿಸಿದರು.

## ಪುನಃಶ್ಚೇತನ ಕಾರ್ಯಕ್ರಮ

ಶ್ರೀ ಮಠದಲ್ಲಿ ಸೆಪ್ಟೆಂಬರ್ 30 ಮತ್ತು ಅಕ್ಟೋಬರ್ 1, 2 ಮೂರುದಿನಗಳು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಎಲ್ಲಾ ಶಿಕ್ಷಕರು ಮತ್ತು ಸಿಬ್ಬಂದಿ ವರ್ಗದವರಿಗೆ ಹೊಸ ಪಠ್ಯವಸ್ತುವಿಗೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳಲ್ಲಿ ಪುನಃಶ್ಚೇತನ ಕಾರ್ಯ ಕ್ರಮ ಏರ್ಪಡಿಸಲಾಗಿತ್ತು. 600 ಮಂದಿ ಈ ವಿಚಾರ ಸಂಕಿರಣ ಮತ್ತು ಕಾರ್ಯಾ-ಗಾರದಲ್ಲಿ ಭಾಗವಹಿಸಿದ್ದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹ ನಿರ್ದೇಶಕರಾದ ಶ್ರೀ ರವೀಂದ್ರನಾಥ್ ಇದರ ಉದ್ಘಾಟನೆ ನೆರವೇರಿಸಿದರು. ಪೂಜ್ಯ ಶ್ರೀ ಶ್ರೀ ಗಳು ಸಮಾರೋಪ ಸಮಾರಂಭದಲ್ಲಿ ಶಿಕ್ಷಕರು ಜ್ಞಾನದಾಹವುಳ್ಳವರಾಗಿ ಪ್ರಗತಿಪರ ಧ್ಯೇಯ ಧೋರಣೆಗಳಿಗೆ ಅನುಗುಣವಾಗಿ ವಿಕಾಸವಾಗಬೇಕೆಂದು ಆಶಿಸಿದರು. ಮೇಲ್ವಿಚಾರಕರಾಗಿ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ. ಕೆ. ನಂಜುಂಡಪ್ಪ ಮತ್ತು ವಿದ್ಯಾಧಿಕಾರಿಗಳಾದ ಶ್ರೀ ಸಿ. ಎಸ್. ಸಿದ್ಧಲಿಂಗಯ್ಯ ಪಾಲ್ಗೊಂಡಿದ್ದರು.

94-ಆಗಸ್ಟ್ ಮುಂದಿನ ಸಂಚಿಕೆಯ ಭಾಗ

## ಕಾರಣ ಪುರುಷ ಬಸವೇಶ್ವರ ಭಾಗ—8

ಬಸವಣ್ಣನು ಮೊದಲು ತನ್ನ ಮನದ ಕಾಳಿಕೆಯನ್ನು ಕಳೆದುಕೊಂಡು ತನ್ನ ಮನಸ್ಸಿನಲ್ಲಿದ್ದ ಲೋಪದೋಷಗಳನ್ನು ಕಳೆದುಕೊಂಡೇ ಇಲ್ಲವೆ, ಅದಕ್ಕಾಗಿ ಹಗಲಿರುಳೂ, ಸದಾ ಪ್ರಯತ್ನಿಸುತ್ತ ಲೋಕದ ಜನರನ್ನು ಸುಧಾರಿಸಲು ಹವಣಿಸಿ ಆತನ ಕಾಲದಲ್ಲಿ ಧರ್ಮದ ಹೆಸರಿನಲ್ಲಿಯೂ ದುರಾಚಾರವನ್ನು ನಡೆಯಿಸುವವರನ್ನು ಖಂಡಿಸಿ ನೀತಿಯ ತಳಹದಿಯಿಂದಲೇ ಧರ್ಮವು ಜನರನ್ನು ಉದ್ಧಾರಿಸುವುದೆಂದು ಸಾರಿದನು.

ತಾನೇ ಆಚರಿಸದ ಉತ್ತಮ ನಡತೆಯನ್ನು ಇತರರಿಗೆ ಬೋಧಿಸಿದರೆ ಅದು ಎಂದೂ ಆದರ್ಶವಾಗಲಾರದು. ನಡೆ-ನುಡಿ ಎರಡೂ ಸರಿಯಾಗಿರುವವನೇ ಇತರರನ್ನು ಸನ್ಮಾರ್ಗಕ್ಕೆ ತರಲು ಸಾಧ್ಯವಾಗುತ್ತದೆ. ಎಂಬುದನ್ನು 'ಲೋಕದ ಡೊಂಕ ನೀವೇಕೆ ತಿದ್ದುವಿರಿ ? .......' ಎಂಬ ಸುಪ್ರಸಿದ್ಧವಾದ ವಚನದಲ್ಲಿ ತಿಳಿಸಿರುವನು. ಇತರರ ಕಷ್ಟದಲ್ಲಿ ಬರೇ ಬಾಯಿಂದ ಸಹಾನುಭೂತಿಯನ್ನು ತೋರಿಸಿ, ಕಾರ್ಯದಲ್ಲಿ ಸಹಾಯ ಮಾಡದ ಜನರಿಗೆ ಇದು ದೇವ ಮೆಚ್ಚುವ ನಡವಳಿಕೆಯಲ್ಲ ಎಂದು ಸೂಚಿಸಿದ್ದಾನೆ.

ಸಮಾಜದಲ್ಲಿ ಹುಟ್ಟಿನಿಂದ ಕೀಳುತನ ಬರುವುದಿಲ್ಲ, ಕೆಟ್ಟತನದಿಂದ ಕೀಳುತನ ಬರುತ್ತದೆ ಎಂಬುದನ್ನು ಎತ್ತಿಹಿಡಿದು ಸರ್ವ ಸಮಾನತೆಯ ತತ್ವವನ್ನು ಬೋಧಿಸಿ, ಆಚರಣೆಯಲ್ಲಿ ಅದನ್ನು ತಂದುದರಿಂದ ಸಕಲ ವರ್ಗಗಳವರೂ ವೀರಶೈವ ಧರ್ಮದಲ್ಲಿ ಸೇರಹತ್ತಿದರು. ಜಾತಿಗಿಂತ ನೀತಿ ಹಿರಿದು ಎಂಬುದು ಇದೇನು ಎಲ್ಲರಿಗೂ ಹೊಸ ಸಿದ್ಧಾಂತವಾಗಿರಲಿಲ್ಲ.

ಬಸವಣ್ಣನಿಗಿಂತಲೂ ನೂರಾರು ವರ್ಷ ಹಿಂದೆ ಇದ್ದ ಮಾದರ ಚೆನ್ನಯ್ಯನು ಇದನ್ನು "ನುಡಿ ಲೇಸು ನಡೆಯದ ಧರ್ಮವಾದಲ್ಲಿ ಅದೇ ಹೊಲೆ.... ಆಚಾರವೇ ಕುಲಃ ಅನಾಚಾರವೇ ಹೊಲೆ ಎಂದು ಸೂತ್ರರೂಪವಾಗಿ ಹೇಳಿದ್ದನು.

ಹಿಂಸೆ ಮಾಡುವವನೇ ಚಮಗಾರ ಎಂದು ಹೇಳಿದಂತೆ ಬಸವಣ್ಣನು ಆಚಾರವೇ ಸ್ವರ್ಗ, ಅನಾಚಾರವೇ ನರಕ ಸತ್ತುದನೆತ್ತಿ ತಿಂಬುವನದೆತ್ತ ಹೊಲೆಯ ? ಕೊಲ್ಲುವ ವನೇ ಮಾದಿಗ ಮುಂತಾಗಿ ಮೇಲು ಕೀಳಿನ ತಾರತಮ್ಯವನ್ನು ನಿರೂಪಿಸಿದ್ದನು.

"ದಯಾಮೂಲಂ ಧರ್ಮಂ " ಎಂಬುದು ಬಸವಣ್ಣನವರಿಗಿಂತ ಹಿಂದೆಯೇ ಸಾರಿದ್ದ ವಿಚಾರ, ಆದರೆ, ವೇದಧರ್ಮದಲ್ಲಿ ಯಜ್ಞಯಾಗಾದಿಗಳಲ್ಲಿ ಹೋತನ್ನು ವಧಿಸಿ

ಅದನ್ನು ಯಜ್ಞದಲ್ಲಿ ಆಹುತಿಯಾಗಿ ಕೊಡುವುದನ್ನು ಸರ್ವಜೀವದಯಾಪರರಾದ ಬಸವಣ್ಣನವರು ಹಲವು ವಚನಗಳಲ್ಲಿ ಖಂಡಿಸಿರುವುದು ಕಂಡುಬರುತ್ತದೆ. ದಯೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ ಎಂಬ ಕಾರಣದಿಂದಮಾಂಸಾಹಾರವನ್ನು ಬಸವಣ್ಣನವರು ನಿಷೇಧಿಸಿದರು.

"ಅಹಿಂಸಾ ಪರಮೋ ಧರ್ಮಃ" ಎಂದು ಬೋಧಿಸಿ ಹಿಂಸೆಯನ್ನು ಪ್ರೋತ್ಸಾಹಿಸುವುದು ಒಳ್ಳೆಯ ಧರ್ಮಾಚರಣೆಯ ಲಕ್ಷಣವಲ್ಲ.

ಅಲ್ಲಮಪ್ರಭು ನುಡಿದಂತೆ "ತಾಯಿ ರಕ್ಕಸಿಯಾದಂತೆ ಕಾಯವಿಕಾರವು" ಇದು ಮನಸ್ಸಿನ ವಿಕಾರಕ್ಕೂ ಅನ್ವಯಿಸುತ್ತದೆ.

ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ! ಮೊಲೆಗೊಡುವ ತಾಯಿಯು ಸಿಟ್ಟುಗೊಂಡಾಗ ಶಿಶುವಿಗೆ ಮೊಲೆಗೊಟ್ಟರೆ ಆ ಶಿಶುವಿಗೆ ಅದರಿಂದ ಅನಾರೋಗ್ಯವಾಗುತ್ತದೆ.

ತನುವಿನ ಕೋಪ ಹಿರಿಯತನದ ಕೇಡು,
ಮನದ ಕೋಪ ಅರುಹಿನ ಕೇಡು.

ಮನೆಯ ಕಿಚ್ಚು ತನ್ನ ಸುಟ್ಟಲ್ಲದೆ ನೆರೆಮನೆಯ ಸುಡದು. ಕೋಪದಿಂದಾಗುವ ಅನರ್ಥವನ್ನು ಇದಕ್ಕಿಂತ ಉತ್ತಮವಾಗಿ ಹೇಳಲು ಸಾಧ್ಯವಿಲ್ಲ

ಇದಕ್ಕಾಗಿಯೇ ಹಿರಿಯರೊಬ್ಬರು ಕೋಪ ಬಂದಾಗ ದುಡುಕಿ ಕಾರ್ಯಮಾಡದೆ ಒಂದರಿಂದ ಹತ್ತರ ವರೆಗೆ ಅಂಕೆಯನ್ನು ಎಣಿಸಿಕೊಂಡರೆ ಮನಸ್ಸು ಕಡೆಗೆ ಅಂಕೆ [ನಿಯಂತ್ರಣ]ಯಲ್ಲಿ ಬರುತ್ತದೆ. ಮುಂದೆ ಅಗುವ ಅನರ್ಥ ತಪ್ಪುತ್ತದೆ ಎಂದು ಹೇಳಿದರು.

೧. ಹಿಂದಣ ಕಾಲದ ವಿಪ್ರರು ಕುರಿಯ ಹೃದಯವನ್ನು ಸೀಳಿ ಅದರ ವಪೆಯನ್ನು ಯಜ್ಞದಲ್ಲಿ ಆಹುತಿಯನ್ನು ನೀಡಿ, ಕುರಿಯನ್ನು ತಮ್ಮ ಮಂತ್ರಶಕ್ತಿಯಿಂದ ಬದುಕಿಸುತ್ತಿದ್ದರು. ಎಂದು ಹೇಳುವುದನ್ನು ಕಟ್ಟುಕಥೆಯೆಂದು ಹೇಳಬೇಕಾಗುತ್ತದೆ.

ಬಸವಣ್ಣನವರು ಸಾಮಾಜಿಕ ಕ್ರಾಂತಿಯನ್ನು ಅದ್ವಿತೀಯವಾದ ರೀತಿಯಲ್ಲಿ ಸಾಧಿಸಿದರು. ತಾನು ಹುಟ್ಟಿದ ಜಾತಿಯ ಕರ್ಮಠತನವನ್ನು ಪ್ರತಿಭಟಿಸಿ ಸರ್ವ ಸಮಾನತೆಯ ತತ್ವಕ್ಕೆ, ಕ್ರಾಂತಿಗೆ ಪ್ರಥಮ ಪೀಠಿಕೆಯನ್ನು ಹಾಕಿದರು. ಅಂದಿನಿಂದ ಇಂದಿನ ವರೆಗಿನ ಭಾರತದಲ್ಲಿ, ಬ್ರಾಹ್ಮಣನಾಗಿ ಹುಟ್ಟಿ ನೂರಕ್ಕೆ ನೂರರಷ್ಟು ಬ್ರಾಹ್ಮಣ್ಯದಿಂದ ಬಿಡಿಸಿಕೊಂಡು, ಜಾತ್ಯತೀತ ತತ್ವಗಳನ್ನು ಸಂತ ಜೀವನದಲ್ಲಿ ಅತ್ಯುನ್ನತ ಮಟ್ಟದಲ್ಲಿ ಆಚರಿಸಿದ ಮೊದಲ ವ್ಯಕ್ತಿ ಯಾರು ? ಎಂಬ ಬಗ್ಗೆ ಹೆಸರು ಹೇಳಬೇಕಾಗಿ ಬಂದರೆ ಬಸವಣ್ಣ ಎಂದೇ ನಾನು ಹೇಳುತ್ತೇನೆ ಎಂದರು ಶ್ರೀ ಎಸ್. ಎಂ. ವೀರಭದ್ರಯ್ಯ. ಈಗಿನ ನಿಡುಮಾಮಿಡಿ ಸಂಸ್ಥಾನದ ನೂತನ ಮಹಾಸ್ವಾಮಿಗಳು. ೧



"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನ್ನೂ ಒಂದೇ ಎಂಬೆ .. ....ಎಂಬ ವಚನ ಸುಪ್ರಸಿದ್ಧವಾದುದು.

ತನ್ನ ಜನ್ಮಕ್ಕೆ ಮಾದರಸ ತಂದೆಯಾದರೂ ಮಾದಾರ ಚನ್ನಯ್ಯನೇ ತನ್ನ ತಂದೆ ಎಂದು ಹೇಳುವಷ್ಟು ಮಟ್ಟಿಗೆ ಅವರಿಗೆ ಶ್ರೇಷ್ಠ ಶರಣನ ಮೇಲೆ ಅಭಿಮಾನ ವುಂಟಾಗಿತ್ತು.

ಬಸವಣ್ಣ ಅಸ್ಪೃಶ್ಯೋದ್ಧಾರ ಮಾಡಿದ ಸಮಾಜಸುಧಾರಕ ತಾನು ಎಂದು ಆತ ಹೇಳಿರಲು ಸಾಧ್ಯವೇ ಇಲ್ಲ. ಶಿವಭಕ್ತಿಯೇ ಎಲ್ಲರನ್ನು ಉದ್ಧರಿಸುತ್ತದೆ ಎಂಬುದೇ ಬಸವಣ್ಣನ ನಿಲುವು ಅದಕ್ಕೆ ಮಾದಾರ ಚೆನ್ನಯ್ಯ, ಡೋಹಾರ ಕಕ್ಕಯ್ಯನವಂಥವರೇ ಆದರ್ಶರು. ಈ ಶರಣರು ಶಿವಸ್ವರೂಪರು; ಅಷ್ಟೇ ಅಲ್ಲ, ಅವನಿಗಿಂತ ಮೇಲಿನವರು ಆದರೆ. ಹಲವಾರು ರೀತಿಗಳಿಂದ ಸರ್ವಸಮತಾ ಭಾವವನ್ನು ಪರಿಣಾಮಕಾರಿಯಾಗಿ ವಚನಿಸಿ, ಪ್ರಚಾರಿಸಿ, ಅಸಂಖ್ಯಾತ ಶರಣರನ್ನು ಒಂದೇ ವೇದಿಕೆಯ ಮೇಲೆ ತಂದ ಸಂಘಟತನ ಶ್ರೇಯಸ್ಸು ಬಸವಣ್ಣನದಾಯಿತು.

ಈ ಸಂಘಟನೆಗೆ ದೈವಶ್ರದ್ಧೆಯ ಬಲವಿದ್ದರೇ ಇದು ಪ್ರಾಬಲ್ಯವನ್ನು ಪಡೆದು ಸಮಾಜವು ಪ್ರಗತಿಯ ಮಾರ್ಗದಲ್ಲಿ ಮುನ್ನಡೆಯಲು ಸಾಧ್ಯವೆಂಬ ಕಾರಣದಿಂದ ತಾನು ಉಳಿದ ಎಲ್ಲ ಶಿವಶರಣರೂ ನಂಬಿದ ಏಕೇಶ್ವರೋಪಾಸನೆಯ ಕ್ರಮವನ್ನು ಅವರು ಆಚರಣೆಯಲ್ಲಿ ತಂದರು; ಇತರರಿಗೂ ಬೋಧಿಸಿದರು.

"ಸಕಲ ಜೀವಾತ್ಮರಿಗೆ, ಲೇಸನೇ ಬಯಸುವರು ನಮ್ಮ ಕೂಡಲ ಸಂಗನ ಶರಣರು ಎಂಬ ಮಹಾವಾಕ್ಯದಲ್ಲಿನ ಸಕಲ ಜೀವಾತ್ಮ ಎಂಬ ಶಬ್ದಗಳಿಗೆ ಕೊಟ್ಟಿದ್ದ ಅವಧಾರ-ಣೆಯನ್ನು ಗಮನಿಸಬೇಕು. "ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ"

೧. ಚಿಂತನ ಚೇತನ ೨ನೇ ಆವೃತ್ತಿ ಪುಟ ೮೪ ಜಗದ್ಗುರು ಸಾರಂಗಧರೇಶ್ವರ ಪ್ರಕಾಶನ ಶ್ರೀ ಶೈಲ.

ಇಲ್ಲಿ ಜೀವಾತ್ಮವು ಸಮಸ್ತ ಜೀವರಾಶಿಗಳನ್ನು ಒಳಗೊಂಡಿರುತ್ತದೆ.

ಪುರುಷರು ಮಾತ್ರವಲ್ಲ, ಸ್ತ್ರೀಯರು ಮಾತ್ರವಲ್ಲ, ಮಕ್ಕಳು ಮರಿಗಳು ಮಾತ್ರವಲ್ಲ, ಸಮಸ್ತಪ್ರಾಣಿಗಳು, ಕ್ರಿಮಿಕೀಟಗಳು ಈ ಸಕಲ ಜೀವಾತ್ಮರಲ್ಲಿ ಸೇರಬಹುದು. ಎಲ್ಲ ಪ್ರಾಣಿಗಳಲ್ಲೂ ದಯೆಯನ್ನು ತೋರಿಸಬೇಕು ಎಂದು ಇನ್ನೊಂದು ವಚನದಲ್ಲಿ ಅಣ್ಣನು ಹೇಳಿದ್ದಾನೆ.

ಈ ಮಾತಿಗೆ ಅಪವಾದವೆಂದರೆ, ಜಗದೇವ, ಮಲ್ಲಿಬೊಮ್ಮಣ್ಣರು (ಬೊಮ್ಮರಸ ಸೇನಾಪತಿ) ಕ್ರೂರ ರೀತಿಯಿಂದ ಹರಳಯ್ಯ ಮಧುವಯ್ಯಗಳ ಕಣ್ಣು ಕೀಳಿಸಿ ಅವರ-

ನ್ನು ಕೊಲ್ಲಿಸಿದ ಬಿಜ್ಜಳಭೂಪನ ವಧೆಯನ್ನು ಮಾಡಿ ಪ್ರತಿಕಾರ ಮಾಡಿ ಸೇಡು ತೀರಿಸಿ ಕೊಂಡದು. ಆದರೆ ಇದರಲ್ಲಿ ಬಸವಣ್ಣ ಈ ಕೊಲೆಗೆ ಪ್ರೇರಕನಾಗಿದ್ದಿರಲ್ಲಿಲ್ಲ ಎಂಬುದು ಸತ್ಯಸಂಗತಿಯಾಗಿದೆ.

ಆರ್ಯ ಅಷ್ಟಾಂಗಿಕ ಮಾರ್ಗವನ್ನು ಬುದ್ಧಗುರು ನೀಡಿದಂತೆ, ಜಗತ್ತಿಗೆ ಬಸವಣ್ಣ ಕಳಬೇಡ ಕೊಲಬೇಡ ಮುಂತಾದ ಸಪ್ತಾಂಗ ಮಾರ್ಗವನ್ನು ನೀಡಿದ್ದಾನೆ ಎಂದು ಶ್ರೀ ಎಸ್.ಎಂ ವೀರಭದ್ರಯ್ಯನವರು ತಿಳಿಸಿದುದುಂಟು. ಮುಂದಿನ ಮಾತೂ ಅವರವೇ

"ಬಸವಣ್ಣನವರಿಗೆ ಆತ್ಮೋದ್ಧಾರ ಆತ್ಮ ಕಲ್ಯಾಣ ಸಾಧ್ಯವಾಗಿತ್ತು. ಆದರಿಂದ ಅವರು ಲೋಕಕಲ್ಯಾಣ ಕಾರ್ಯವನ್ನು ಕೈಕೊಂಡರು. (ಪುಟ ೮೮) ಕಳಬೇಡ, ಕೊಲಬೇಡ ಎಂದು ಪ್ರಾರಂಭವಾಗುವ ವಚನದಲ್ಲಿ, ಇಲ್ಲಿ ಅನ್ಯರಿಗೆ ಅಸಹ್ಯಪಡಬೇಡ ಎಂಬುದು ಮಾತಿನಲ್ಲಿ ಅನ್ಯರೂ ತನ್ನಂತೆಯೇ ಶಿವಾಂಶಸಂಭೂತರು ಎಂಬ ನಿಲವಿನಲ್ಲಿ ಅವರನ್ನು ದ್ವೇಷಿಸದೆ, ಇರಬೇಕು ಎಂದೇ ಹೊರತು ಅವರ ಅವಗುಣಗಳನ್ನು ಖಂಡಿಸಬಾರದು ಎಂಬುದಲ್ಲ.

ತನ್ನ ಬಣ್ಣಿಸಬೇಡ ಎಂಬ ಮಾತು ತನ್ನಲ್ಲಿ ಅಹಂಕಾರವನ್ನು ಹೊಂದಿರಬಾರದು ತನ್ನನ್ನು ತಾನೇ ಹೊಗಳಿಕೊಳ್ಳಬಾರದು ಇತರರನ್ನು (ಇದಿರ) ಹಳಿಯಲು ಬೇಡ ಎಂಬದು ಬೇರೆಯವರ ಒಳ್ಳೆ ಗುಣಗಳನ್ನು ತಿಳಿದುಕೊಂಡುಗೌರವಿಸಬೇಕು. ಎಂಬ ಅರ್ಥದಲ್ಲಿ ಬಂದಿದೆ.

ಇದಕ್ಕೆ ಬಸವಣ್ಣ ಬೇರೆ ವಚನದಲ್ಲಿ ಹೇಳಿದ ಪರಾಂಗನಾ (ಪರಪುರುಷ) ವಿರತಿಯ ನೀತಿತತ್ವವನ್ನು ಸೇರಿಸಿದರೆ ಇದು ಬಸವಣ್ಣ ನಿರೂಪಿಸಿದ ಅಷ್ಟಾಂಗ ಮಾರ್ಗವಾಗುತ್ತದೆ. ಇಲ್ಲಿ ಅಂತರಂಗ ಶುದ್ಧಿ, ಬಹಿರಂಗಶುದ್ಧಿಗಳೆರಡರ ಸಮನ್ವಯವಾಗುತ್ತದೆ. ಅಲ್ಲಮಪ್ರಭು ನುಡಿದು 'ಅಂತರಂಗದ ಅರಿವಿಂಗೆ ಆಚಾರವೇ ಕಾಯ' ಎಂಬ ಮಾತು ಈ ಉಪದೇಶದ ತಳಹದಿಯಂತೆ ಇದೆ ಎಂದು ಹೇಳಬಹುದು.

ಬಸವಣ್ಣನವರು ವರ್ಣಾಶ್ರಮ ಧರ್ಮದ ಸಂಕಲೆಯನ್ನು ಕಡಿದೊಗೆದು. ಶಿವಭಕ್ತರಾದವರು ಯಾವುದೇ ಜಾತಿಯಿಂದಲೇ ಬಂದಿರಲಿ; ಅವರೆಲ್ಲರೂ ಸಮಾನರು; ಎಂಬ ವೀರಶೈವ ಧರ್ಮದ ಸುಧಾರಣಾಕ್ರಾಂತಿಯನ್ನು ಎತ್ತಿಹಿಡಿದರು. ಹೊಲೆತನವು ಜನ್ಮದಿಂದಲ್ಲ. ಕೆಟ್ಟ ಭಾವನೆಯಿಂದ ಮಾಡುವ ಕರ್ಮದಿಂದ ಬರುತ್ತದೆ. ಎಂದು ನೀತಿ ಧರ್ಮವನ್ನು ಬೋಧಿಸಿದರು. 'ಆಚಾರವೇ ಕುಲ; ಅನಾಚಾರವೇ ಹೊಲೆ' ಎಂಬ ವಚನವನ್ನು ರಚಿಸಿದ್ದ ಮಾದಾರ ಚೆನ್ನಯ್ಯನ ಸೂತ್ರವಾಕ್ಯದ ಇಂಗಿತವನ್ನು ಹಲವಾರು ವಚನಗಳಲ್ಲಿ ವಿವರಿಸಿ 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ಜಗತ್ತಿಗೆ ಸಾರಿದರು.



ಮೊದಲು ಲಾಂಛನಕ್ಕೆ ಶರಣೆನ್ನುವೆ; ಶರಣರ ಆಚಾರ ಅನಾಚಾರವನ್ನು ಪ್ರಶ್ನಿಸುವುದಿಲ್ಲವೆಂದು ಹೇಳಿದ್ದರೂ ಮುಂದೆ ಶರಣರಲ್ಲೂ ನೀತಿ ವಿಚಾರ-ಆಚಾರ ಬೇಕೆಂದು ನುಡಿದರು.

೪೧೭ ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀಯೆಂಬೆನು ನೀತಿಯು ಎಲ್ಲರಿಗೂ ಸಂಬಂಧಿಸಿದೆ.

೩೫೩ .......ಕಳ್ಳ-ಹಾದರಿಗರ ಕೈಯಲು ಪೂಜೆಯ ಕೊಳ್ಳ ನಮ್ಮ ಕೂಡಲ ಸಂಗಮ ದೇವ "ಕಳವು, ಪರದ್ವಾರ, ಅನ್ಯದೈವ ಭವಿಯ ಸಂಗವುಳ್ಳನ್ನಕ್ಕ ಲಿಂಗಭಕ್ತನೆನಿಸಬಾರದು"

ಸ್ತ್ರೀ ಪುರುಷರಲ್ಲಿ ಸಂಪೂರ್ಣ ಸಮಾನತೆ ಮತ್ತು ಸಮಾನ ಗೌರವಗಳನ್ನು ನೀಡಬೇಕೆಂದು ಪ್ರತಿಪಾದಿಸಿ, ಸ್ತ್ರೀಯರ ಆತ್ಮವಿಕಾಸಕ್ಕೆ ಯೋಗ್ಯವಾದ ವಾತಾವರಣವನ್ನು ಉಂಟು ಮಾಡಿದರು. ಚಾಮರಸನು ತಿಳಿಸಿದಂತೆ ಬಸವಣ್ಣನವರು ಉಂಡಾಡಿಗಳ ಮೇಲೆ ಬಂಕದೆರೆಯನ್ನು ವಿದ್ಯಾಭ್ಯಾಸದ ಕರಕವಣೆಯನ್ನು ಸುಖಸಾಧನಗಳ ಸುಂಕ ವಿಂಡಿಗೆಯನ್ನೂ ನೀರಾವರಿ ತೆರಿಗೆಯನ್ನು ಹೇರಿದ್ದು ನಿಜವಾದರೆ, ಶ್ರೇಷ್ಠ ಆಡಳಿತಗಾರರಾಗಿದ್ದರು.

೧. ಡಾ॥ ಸಿದ್ದಯ್ಯ ಪುರಾಣಿಕರ 'ಶರಣ ಚರಿತಾಮೃತ' ಗ್ರಂಥದ ಪೀಠಿಕೆ

.......ಬಸವಣ್ಣನವರು ವಿಸ್ತೃತ ಹಾಗೂಸಮಗ್ರರೂಪದ ಸಮಾಜ ಸುಧಾರಣಾ ಯೋಜನೆಯನ್ನು, ದಿಟ್ಟತನದಿಂದ ಕಾರ್ಯರೂಪಕ್ಕಿಳಿಸಿದರು.

ಶ್ರೀ ಜೇಮ್ಸ್ ಕ್ಯಾಂಪ್ ಬೆಲ್‌ರು ಬರೆದಂತೆ ಇಂದಿನ ಸಮಾಜ ಸುಧಾರಕನು ಬಸವಣ್ಣನವರ ಭಾಷೆಯನ್ನೆ ಬಳಸಿ ಅವರ ವಿಚಾರಗಳನ್ನು ಕಾರ್ಯರೂಪಕ್ಕಿಳಿಸುತ್ತಿದ್ದಾನೆ. (ಟೈಮ್ಸ್ ಆಫ್ ಇಂಡಿಯಾ ೧೭-೫-೯೧೮ ವಚನ ಪಿತಾಮಹ ಗ್ರಂಥದಲ್ಲಿ ಲಿಂ. ಗ. ಸ. ಹಾಲಪ್ಪನವರು ಬಸವಣ್ಣನವರು ಹಾಗೂ ಸ್ವತಂತ್ರ ವಿಚಾರ ಎಂಬ ಲೇಖನದಲ್ಲಿ ಎತ್ತಿ ಕೊಟ್ಟಿದ್ದರು.

'ಬಸವಣ್ಣನವರು ತನ್ನ ಕಾಲಕ್ಕಿಂತ ಬಹಳ ಮುಂದುವರಿದಿದ್ದರು' ದಿ. ರಂಗನಾಥ ದಿವಾಕರರು ಬಸವೇಶ್ವರ ಸಂಸ್ಮರಣ ಸಂಪುಟ ಎಂಬ ಆಂಗ್ಲ ಗ್ರಂಥದಲ್ಲಿ ಬರೆದಿದ್ದರು. [ಪುಟ 80]

ಧರ್ಮದ ಹೆಸರಿನಿಂದ ನಾನಾತರದ ಅನಾಚಾರವನ್ನು ಮಾಡುತಿದ್ದ ಹಲವಾರು

ತರಹಕ್ಕೆ ಜನರ ರೀತಿಗಳನ್ನು ಬಸವಣ್ಣನ ಹಲವು ವಚನಗಳಲ್ಲಿ ಕಾಣಬಹುದು. ಗಂಡ. ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ

೩೨೦. ಮಾರಿಕಪ್ಪೆಯನೋಡು ಕೊರಳಲ್ಲಿ ಕಟ್ಟಿಕೊಂಬರು
ಸಾಲಬಟ್ಟರೆ ಮಾರಿಕೊಂಬರಯ್ಯ !

೨೯೨ ಮಡಕೆ ದೈವ ಮೊರ ದೈವ ಬೀದಿಯ ಕಲ್ಲು ದೈವ.......

ಮುಂತಾಗಿ ಮೂಢನಂಬಿಕೆಗಳಿಂದ ತಿಳಿಯದೆ ಪೂಜೆ ಮಾಡುವ ಅಜ್ಞರ ಚಿತ್ರಣದಂಥ ವಚನಗಳು ಇಲ್ಲಿವೆ.

೧೩೦ ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು;
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ, ನಂಬಿಕೆ ವರ್ತನೆ ಪರಸ್ಪರ ವಿರುದ್ಧವಾಗಿರುವಂತೆ ನಡೆವವರು ಈಗಲೂ ಇದ್ದಾರೆ.

೧೩೭ ಜಾರವ್ಯಸನದ ಹೆಂಗಸನ್ನು ಇಂತಿನಕತ್ತನು ಒಂದೆಸೆ, ಮನ ಒಂದೆಸೆ, ಮಾತೊಂದೆಸೆ ಎಂದು ನಿಂದಿಸಿದ್ದಿದೆ.

'ಹಾದರಕೆ ಹೋದರೆ ಕಳ್ಳದಮ್ಮವಾಯಿತ್ತು; ಹಾಳು ಗೋಡೆಗೆ ಹೋದರೆ ಚೇಳೂರಿತ್ತು..........ಇಲ್ಲಿ ಕಳ್ಳದಮ್ಮ ನಡೆಯಲಾರದ ಗ್ರೀಕ ನಾಣ್ಯ

ನರಮಾಂಸವನ್ನು ಭುಂಜಿಸುವ ವಾಮಾಚಾರದ ಶೈವರು ಆ ಕಾಲಕ್ಕೂ ಅದಕ್ಕೂ ಹಿಂದೆಯೂ ಇದ್ದರು; ಈಗಲೂ ಇದ್ದಾರೆ.

೧೫೭ ಇದು ಹಿರಿಯರು ನರಮಾಂಸವ ಭುಂಜಿಸುವರೆ ? ಎಂಬಲ್ಲಿ ಕಾಣುತ್ತದೆ ಯಜ್ಞಯಾಗಾದಿಗಳಲ್ಲಿ ಹಿಂಸೆ ಮಾಡುವುದನ್ನು ಬಸವಣ್ಣ ಹಲವೆಡೆ ಖಂಡಿಸಿರುತ್ತಾನೆ. ಹೊಲೆಯರ ಬಸಿರಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬರೆಂಬುದಕ್ಕೆ ಇದೇ ದೃಷ್ಟ.

ಇಲ್ಲಿ ಹೊಲೆಯರು ಎಂಬ ಶಬ್ದ ಧರ್ಮದ ಹೆಸರಿನಿಂದ ಕುರಿಯನ್ನು ವಧಿಸುವವರಿಗೆ ಸಂಬಂಧಪಟ್ಟದೆ.

ಬಸವಣ್ಣ ಮತ್ತು ಇತರ ವಚನಕಾರರ ಹಲವು ವಚನಗಳಲ್ಲಿ ಆ ಕಾಲದ ಸಾಮಾಜಿಕ ಪದ್ಧತಿಗಳ ಹಾಗೂ ಧಾರ್ಮಿಕ ಆಚರಣೆಗಳ ಹಾಗೂ ಸಾಂಸ್ಕೃತಿಕ ವಿಷಯದಲ್ಲಿ ಮಹತ್ತ್ವ ಪೂರಿತವಾದ ಉಲ್ಲೇಖಗಳು ದೊರೆಯುತ್ತವೆ.



'ಕುರುಳು ಬೆರಳು ಮುಡುಹು ಮುಂಬಲ್ಲ ಕೊಳ್ಳಾ' ವಚನದ ಬಗ್ಗೆ ಡಾ. ಶಿವರುದ್ರಪ್ಪ ತಾವು ಹರಸಿಕೊಂಡ ದೇವತೆಗಳಿಗೆ ಕುರುಳನ್ನು(ತಲೆಗೂದಲು) ಕತ್ತರಿಸಿ ಕೊಡುವುದು ಬೆರಳುಗಳನ್ನೆ ಕತ್ತರಿಸಿ ಒಪ್ಪಿಸುವುದೂ, ಮುಡುಹು[ಭುಜ]ಗಳ ಮೇಲೆ ಮುದ್ರೆಯೊತ್ತಿಸಿಕೊಳ್ಳುವುದೂ, ಮುಂಬಲ್ಲಗಳನ್ನೂ ಕಳಚಿ ಕೊಡುವುದು, ರೂಢಿಯಲ್ಲಿತ್ತೆಂಬುದು ಇಲ್ಲಿ ಕಾಣಿಸಿರುವ ಬಸವಣ್ಣನವರ ಮಾತಿನಲ್ಲಿ ಸ್ಪಷ್ಟವಾಗಿದೆ" (ಸಾಧನೆ ನಂ 6-ಸಂ 3, ಪುಟ 43 )ಎಂದು ವಿವರಿಸಿದ್ದಾರೆ.

ಹಾದರಕ್ಕೆ ಮೂಗನ್ನು ಕೊಯ್ದು ಶಿಕ್ಷೆ ನೀಡುತ್ತಿದ್ದುದು ತಿಳಿಯುತ್ತದೆ. ಆ ಕಾಲದಲ್ಲೂ ಮಂತ್ರ ವೈದ್ಯ ಮಾಡುವವರಿದ್ದರು

೩೫೬ "ಗುರೂಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ನೋಡಾ.' ಎಂಬುದರಿಂದ ಶಸ್ತ್ರವೈದ್ಯಕ್ಕೆ ಕೊಟ್ಟ ಮಹತ್ವ ತಿಳಿದುಬರುತ್ತದೆ.

ಬಸವಣ್ಣನ ವಚನಗಳಲ್ಲಿ ಹಗರಣಿಗರು, ಕೋಡಂಗಿ ವೇಷ ಗಾರುಡಿಗರು,ಯುದ್ಧದ ವೇಷ ಹಾಗು ಆಯುಧಗಳನ್ನು ಧರಿಸಿದ ವೀರರು, ಮೈಲಾರನ ಭಕ್ತರು ಮುಂತಾದವರೆಲ್ಲರ ಜೀವನದ ಸುಳುಹುಹೊಳಹು ಕಾಣುತ್ತದೆ.

ಹಲವಾರು ಮೂಢನಂಬಿಕೆಗಳನ್ನು ಹೀಗೆಳೆದ ಬಸವಣ್ಣ ವಚನಗಳಲ್ಲಿ ಕೆಲವನ್ನು ತನ್ನ ಭಕ್ತಿಯ ಸೂಚಕವಾಗಿ ಬಳಸಿರುವುದು ಕಂಡುಬರುತ್ತದೆ.

೨೨೭ ಅಂಗೈ ತಿಂದುದು ಎನ್ನ ಕಂಗಳು ತೆತ್ತಿಹವಯ್ಯ.
ಬಂದಹರಯ್ಯ ಪುರಾತರೆನ್ನ ಮನೆಗೆ.

ಪುರಾತನ ಶಿವಭಕ್ತರೂ ಆಗಿನ ಶಿವಶರಣರೂ ಬಸವಣ್ಣನ ಕನಸ್ಸಿನಲ್ಲಿ ಬರುವುದಕ್ಕೆ ಪೂರ್ವಭಾವಿಯಾದ ಅಂಗೈ ತುರಿಸುವುದು ಕಂಗಳ ಎಲೆ ಹಾರುವುದು ಇಲ್ಲಿ ಬಂದಿವೆ

ಡಾ. ಎಂ. ಚಿದಾನಂದಮೂರ್ತಿಯವರು 'ಬೆಳಗಾವಿಯಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷತೆ ವಹಿಸಿದ್ದ ಮಹಾತ್ಮ ಗಾಂಧೀಜಿಯವರು, ತಾವು ಅಂದು ಭಾರತದಲ್ಲಿ ಮಾಡಲು ಪ್ರಯತ್ನಿಸುತ್ತಿರುವುದನ್ನು ಒಂದು ಬಗೆಯಲ್ಲಿ ಬಸವಣ್ಣನವರು ಕ್ರಿ. ಶ. ಹನ್ನೆಡನೆಯ ಶತಮಾನದಲ್ಲಿಯೇ ಮಾಡಿ ಬಿಟ್ಟಿದ್ದರು ಎಂದು ಹೇಳಿದರಂತೆ....ಭಾರತದ ಅತ್ಯಂತ ದೊಡ್ಡ ಸಮಾಜ ಸುಧಾರಕರಾದ ಗಾಂಧೀಜಿಯವರಿಂದ ಬಸವಣ್ಣನವರಿಗೆ ಇಂಥ ಗೌರವ ಲಭಿಸಿದೆ" ಎಂದು ಬಸಣ್ಣನವರು ಎಂಬ ತಮ್ಮ ಗ್ರಂಥದಲ್ಲಿ ಬರೆದಿದ್ದರು.. ಪುಟ (102)

'Sayings of Basava ಬಸವಣ್ಣನವರ ವಚನಗಳು' ಎಂಬ ಒಂದು

ಇಂಗ್ಲಿಷ್ ಗ್ರಂಥವು ಕುಮಟಾ ಡಾ. ಬಾಳಿಗಾ ಕಾಲೇಜಿನ ಗ್ರಂಥಾಲಯದಲ್ಲಿತ್ತು. ಅದರ ಲೇಖಕರ ಹೆಸರು ನನಗೆ ನೆನಪಿಲ್ಲ.

ಆ ಗ್ರಂಥಕ್ಕೆ ಶ್ರೀ ರವೀಂದ್ರನಾಥ ಟಾಗೂರರು ಚಿಕ್ಕ ಮುನ್ನುಡಿಯನ್ನು ಬರೆದಿದ್ದರು ನಾಲ್ಕೇ ವಾಕ್ಯಗಳ ಆ ಮುನ್ನುಡಿಯನ್ನು ನಾನು ಪ್ರತಿ ಮಾಡಿಕೊಂಡಿದ್ದು ಕಳೆದು ಹೋಗಿತ್ತು. ಆ ಗ್ರಂಥವು ಈಗ ಎಲ್ಲಿಯಾದರೂ ಇರುವುದೇನೆಂದು ತಿಳಿಯದು ವಚನ ವಿದ್ವಾಂಸ ಡಾ. ಆರ್. ಸಿ. ಹಿರೇಮಠ ಅವರು ಬಸವಣ್ಣನವರ ಕುರಿತಾಗಿನ ನೂರಾರು ಗ್ರಂಥಗಳ ಪ್ರದರ್ಶನ ಏರ್ಪಟಲ್ಲಿ ಸಹ ಈ ಗ್ರಂಥವು ಇರಲಿಲ್ಲವೆಂದು ಹೇಳಿದ್ದರು.

ಬಹುಶಃ ಈ ಗ್ರಂಥವು ಖಾಸಗಿ ಪ್ರಕರಣಕ್ಕಾಗಿ ಪ್ರಕಟಿತವಾಗಿದ್ದು ಕೆಲವೇ ಪ್ರತಿಗಳ ಆ ಗ್ರಂಥವು ಕಳೆದುಹೋಗಿರಬೇಕು.

ಟಾಗೂರರು ಆ ಮುನ್ನುಡಿಯ ಕೊನೆಯ ವಾಕ್ಯದಲ್ಲಿ ಬಸವಣ್ಣನವರ ಜಗತ್ತಿನ ಶ್ರೇಷ್ಠ ವಿಭೂತಿ ಪುರುಷರಲ್ಲಿ ಒಬ್ಬರು ಎಂದು ಪ್ರಶಂಸಿಸಿದ್ದರು.

“ ಬಸವಣ್ಣನವರಲ್ಲಿ ಕಂಡಂತಹ ವಿಶ್ವಬಾಂಧವ್ಯದ ವಿಶ್ವಪ್ರೇಮದ, ವಿಶ್ವಚೇತನದ ಪ್ರಾದುರ್ಭಾವವು ಹಲವು ಶತಮಾನಗಳಿಗೊಂದು ಸಲ ಮಾತ್ರ ಜಗದದ್ಭುತ! ’ ಜರುಗುವ ಎಂದು ಡಾ. ಎಲ್. ಬಸವರಾಜು ಬಸವಣ್ಣನವರ ವಚನಗಳು ಎಂಬ ಗ್ರಂಥದಲ್ಲಿ ಪ್ರಶಂಸಿಸಿದ್ದುಂಟು!

....ಡಾ॥ ಎಲ್. ಆರ್. ಹೆಗಡೆ, ಸಿದ್ದಾಪುರ, ದಕ್ಷಿಣ ಕನ್ನಡ ಜಿಲ್ಲೆ.





# ಸ್ವಾತಂತ್ರ್ಯ ಸಂಗ್ರಾಮದ ಪ್ರೇರಕ ಶಕ್ತಿ

ಭಾರತದ ಸ್ವಾತಂತ್ರ್ಯ ಸಂಗ್ರಾಮ. ದೀರ್ಘಕಾಲದ ತನಕ ನಡೆಯುತ್ತಿದ್ದ ಸಂಘರ್ಷದ ಬಲಿದಾನಗಳ ರಕ್ತರಂಜಿತ ಕಥೆ. ಸ್ವಾತಂತ್ರ್ಯ ಘೋಷಣೆಗಳನ್ನು ಕೂಗುತ್ತಿದ್ದ ಜನ ಪೊಲೀಸರ ಗುಂಡೇಟಿಗೆ ಬಲಿಯಾಗಿ ನಗುನಗುತ ಸಾವನ್ನಪ್ಪಿದರು.

ಈ ಕಾರ್ಯದಲ್ಲಿ ನಾರಿಯರು ಹಿಂದುಳಿಯಲಿಲ್ಲ. ಅವರು ಮುಂದಾಳಾಗಿ ಸಾಗಿದರು. ಜೀವನದ ಎಲ್ಲ ಸುಖಗಳಿಗೂ ತಿಲಾಂಜಲಿಯಿತ್ತು ಕಠೋರಸಾಧನೆ ಹಾಗೂ ಕಷ್ಟಮಯ ಜೀವನವನ್ನು ಸ್ವೇಚ್ಛೆಯಿಂದಲೇ ಸ್ವೀಕರಿಸಿದ ಮಹಿಳೆಯರಲ್ಲಿ ಶ್ರೀಮತಿ ಭೀಕಾಜಿಕಾಮಾರ ಹೆಸರು ಉಲ್ಲೇಖನೀಯ.

ಬೊಂಬಾಯಿಯ ಒಂದು ಸಂಪನ್ನ ಪಾರ್ಸೀ ಪರಿವಾರದಲ್ಲಿ 24–9–1861 ರಂದು ಶ್ರೀಮತಿ ಭೀಕಾಜಿಕಾಮಾ ಜನಿಸಿದರು. ಶ್ರೀ ಸೋರಾಬ್ಜೀ ಪಟೇಲರ 9 ಮಕ್ಕಳಲ್ಲಿ ಅವರೂ ಒಬ್ಬರು. ಎಲೆಗ್ಸಾಂಡ್ರಿಯಾ ಗರ್ಲ್ಸ್ ಸ್ಕೂಲಿನಲ್ಲಿ ಶಿಕ್ಷಣ ಕೊಡಿಸಿ ತಂದೆ ಅವರಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಬೀಜ ಮೊಳೆಯಲೆಂದು ಹಾರೈಸಿದರು. ಆದರೆ ಭೀಕಾ ಎಷ್ಟೆಂದರೂ ಭಾರತದ ಮಗಳು. ತೀವ್ರ ಬುದ್ಧಿ, ಜನ್ಮಜಾತ ಪ್ರತಿಭೆ ಹಾಗೂ ಸಂವೇದನಶೀಲ ಹೃದಯದ ಯಜಮಾನಿಯಾದ ಭೀಕಾ ತಮ್ಮ ಸುತ್ತಮುತ್ತಲಿನ ಭಾರತೀಯ ವಾತಾವರಣದಿಂದ ಅದೆಂತು ದೂರ ಉಳಿದಾರು? ಭಾರತೀಯರ ಅಪಮಾನಕರ ಜೀವನ ಅವರಿಗೆ ಅಸಹನೀಯವಾಗಿತ್ತು. ಅವರ ದಾರಿದ್ರ್ಯವನ್ನು ಭೀಕಾಜೀ ನೋಡದಾದರು. ಆ ಕಾಲದಲ್ಲಿ ಶ್ರೀಮಂತ ಪರಿವಾರದ ಹೆಂಗಸರು ಮನೆಗಳಿಂದ ಹೊರಟು ಸಮಾಜಸೇವೆಗೆ ತೊಡಗುವುದೆಂದರೆ ತುಂಬ ಸಾಹಸದ ಕೆಲಸವಾಗಿತ್ತು. ಆದರೆ ಭೀಕಾಜೀ ಅದಕ್ಕೂ ಅಳುಕಲಿಲ್ಲ.

ಕಿಶೋರಾವಸ್ಥೆಯಲ್ಲೇ ಭೀಕಾಜೀ ರಾಜಕೀಯದತ್ತ ಆಕರ್ಷಿತರಾದರು. 1885 ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾದ ಬಳಿಕ ಕಾಂಗ್ರೆಸಿನ ಮೊದಲ ಅಧಿವೇಶನ ನಡೆದಾಗ ಅವರಿಗೆ ಕೇವಲ 24 ವರ್ಷವಾಗಿತ್ತು. ನೇತಾರರ ಉಗ್ರ ಭಾಷಣಗಳು ಅವರ ಮೇಲೆ ತುಂಬಾ ಪ್ರಭಾವ ಬೀರಿದುದರಿಂದ, ಅಂದಿನಿಂದಲೇ ಕಾಂಗ್ರೆಸಿನ ಕಾರ್ಯಕರ್ತರಾದರು. ಜಾತಿ, ಮತ, ಧರ್ಮ, ಸಂಪ್ರದಾಯ ಇದಾವುದರ ಭೇದ ಭಾವಗಳನ್ನು ಲೆಕ್ಕಿಸದೆ ಅವರು ಮೊತ್ತಮೊದಲು ಎಲ್ಲ ವರ್ಗಗಳ ಸ್ತ್ರೀಯರ ಹಾಗೂ ಸ್ತ್ರೀ ಸಂಸ್ಥೆಗಳ ಸಂಘಟನಾಕಾರ್ಯವನ್ನು ಕೈಗೊಂಡರು. ಬಡ ಮಹಿಳೆಯರಿಗೆ ಸಹಾಯ ಮಾಡುವುದಲ್ಲದೆ ಅವರಲ್ಲಿ ಸಾಮಾಜಿಕ ಜಾಗೃತಿ ಉಂಟಾಗುವಂತೆಯೂ ತಮ್ಮ ದುಸ್ಥಿಗೆ ಕಾರಣರಾದ ಆಂಗ್ಲರನ್ನು ಹೊಡೆದಟ್ಟಲು ಅವರೆಲ್ಲ ಮನಃ ಪೂರ್ವಕವಾಗಿ ನೆರವಾಗುವಂತೆಯೂ ಮಾಡಿದರು ಭೀಕಾಜಿ.

ಅವರ ಕ್ರಾಂತಿಕಾರೀ ವಿಚಾರ ಹಾಗೂ ಬ್ರಿಟಿಷ್ ಸಾಮ್ರಾಜ್ಯ ವಿರೋಧೀ ಚಟುವಟಿಕೆಗಳಿಂದ ಹೌಹಾರಿದ ತಂದೆ 1885 ರಲ್ಲೇ ಅವರನ್ನು ರುಸ್ತುಮ್ ಜೀಕಾಮಾ ಎಂಬುವರಿಗೆ ಮದುವೆ ಮಾಡಿ ಕೊಟ್ಟರು. ಆದರೆ ಮದುವೆಯೂ ಭೀಕಾಜೀಯವರ ಚಟುವಟಿಕೆಗಳನ್ನು ತಡೆಯದಾಯಿತು. ಆರಂಭದಲ್ಲಿ ಪತಿಯೂ ಅತ್ತ ವಿಶೇಷ ಗಮನ ಕೊಡದುದ್ದರಿಂದ ಭೀಕಾಜಿ ಇಮ್ಮಡಿ ಉತ್ಸಾಹದಿಂದ ಸಮಾಜ ಸೇವೆಯಲ್ಲಿ ತೊಡಗಿದರು. ಆದರೆ ಬರಬರುತ್ತ ಭೀಕಾಜೀ ಪತಿಗಿಂತಲೂ ಸಮಾಜ ಸೇವೆಯಲ್ಲೇ ಹೆಚ್ಚು ವೇಳೆ ಕಳೆಯ ತೊಡಗಿದಾಗ ಸಹಜವಾಗಿಯೇ ಅವರ ವೈವಾಹಿಕ ಜೀವನ ವಿಫಲವಾಯಿತು. " ನನ್ನ ಮದುವೆ ನನ್ನ ಧ್ಯೇಯದೊಂದಿಗೆ ನಡೆದಿದೆ " ಎಂದು ಹೇಳುತ್ತಿದ್ದ ಭೀಕಾಜೀಯವರ ಮನೋಭಾವನೆಯನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಮುಂದೊಂದು ದಿನ ಅವರು ಕಾಯಿಲೆ ಬಿದ್ದಾಗ ಚಿಕಿತ್ಸೆಗೆಂದು ಪತಿ ಅವರನ್ನು ಇಂಗ್ಲೆಂಡಿಗೆ ಕಳುಹಿಸಿದರು. ಪತ್ನಿಯ ಬ್ರಿಟಿಷ್ ವಿರೋಧಿ ಚಟುವಟಿಕೆಗಳು ತಪ್ಪಿಹೋಗುವವೆಂದೂ ಅವರು ಲೆಕ್ಕಹಾಕಿದ್ದರು. ಆದರೆ ಇದು ಕೇವಲ ಭ್ರಮೆಯೆನಿಸಿತು.

ಭೀಕಾಜೀ ಸ್ವಸ್ಥರಾಗಿ ಭಾರತಕ್ಕೆ ಮರಳ ಬೇಕೆಂದಿದ್ದಾಗ, ಪ್ರಸಿದ್ಧ ಭಾರತೀಯ ಕ್ರಾಂತಿಕಾರಿ ಶ್ಯಾಮಜೀವರ್ಮರ ಭೇಟಿಯಾಯಿತು. ಅವರ ಓಜಸ್ವೀ ಭಾಷಣಗಳು ಭೀಕಾಜಿಯವರ ಸುಪ್ತ ಭಾವನೆಗಳನ್ನು ಹೊಡೆದೆಬ್ಬಿಸಿದವು. ಪರಿಣಾಮವಾಗಿ ಭೀಕಾಜೀ ಭಾರತಕ್ಕೆ ಮರಳುವ ವಿಚಾರವನ್ನೇ ತೊರೆದು ಇಂಗ್ಲೆಂಡಿನಲ್ಲೇ ಸ್ವಾತಂತ್ರ್ಯ ಸಮರವನ್ನಾರಂಭಿಸಿದರು. ವರ್ಮಾ ರೊಂದಿಗೆ ಅವರು ಹೈಡ್ ಪಾರ್ಕಿನಲ್ಲಿ ತಮ್ಮ ಪ್ರಭಾವಕಾರೀ ಭಾಷಣಗಳಿಂದ ಸ್ವಾತಂತ್ರ್ಯ ಭಾವನೆಯನ್ನು ಪ್ರಚೋದಿಸಿದರು. ಭಾರತದಂಥ ಗುಲಾಮ ದೇಶದ ಮಹಿಳೆಯೊಬ್ಬಳು ತನ್ನನ್ನಾಳುವವರ ದೇಶದಲ್ಲೇ ಒಂದು ಈ ರೀತಿ ಬಹಿರಂಗವಾಗಿ ವಿದ್ರೋಹ ನಡೆಸುವುದನ್ನು ಕಂಡು ಆಂಗ್ಲರು ನಿಬ್ಬೆರಗಾದರು. ಇಂಡಿಯಾ ಆಫೀಸಿನ ಅಧಿಕಾರಿಗಳು ಕಿಡಿಕಿಡಿಯಾದರು. ಭಾರತಕ್ಕೆ ಮರಳಬೇಕೆಂದೂ ಇಲ್ಲದಿದ್ದರೆ ಅವರ ವಿರುದ್ಧ ಉಗ್ರಕ್ರಮ ಕೈಗೊಳ್ಳಲಾಗುವುದೆಂದೂ ಆ ಅಧಿಕಾರಿಗಳು ಭೀಕಾಜೀಗೆ ಎಚ್ಚರಿಕೆ ನೀಡಿದರು. ಆದರೆ ಭೀಕಾಜೀ ಅದೆಂತು ಒಪ್ಪಬೇಕು ? ಅವರು ಚಳುವಳಿಯನ್ನು ಇನ್ನೂ ಉಗ್ರಗೊಳಿಸಿದರು.

ಭಾಷಷಣಗಳನ್ನು ನಿಲ್ಲಿಸಿದುದರಿಂದ ಅವರನ್ನು ಬಲಾತ್ಕಾರವಾಗಿ ಹೊರದಬ್ಬಬೇಕೆಂದು ಅಧಿಕಾರಿಗಳು ನಿರ್ಧರಿಸಿದರು. ತಮ್ಮ ಮೇಲೆ ಉಗ್ರಕ್ರಮ ಕೈಗೊಳ್ಳಲಾಗುವುದೆಂಬ ಸೂಚನೆ ಸಿಗುತ್ತಲೇ ಭೀಕಾಜಿ ಇಂಗ್ಲೀಷ್ ಕಾಲುವೆಯ ಮೂಲಕ ತಕ್ಷಣವೇ ಫ್ರಾನ್ಸಿಗೆ ಸಾಗಿದರು. ಅಲ್ಲಿ ಪ್ಯಾರೀಸ್ ಅವರ ಕಾರ್ಯಕ್ಷೇತ್ರವಾಯಿತು. ಪ್ಯಾರೀಸಿನಲ್ಲಿ ಅವರ ಮನೆ ಕ್ರಾಂತಿಕಾರಿಗಳ ಕೇಂದ್ರವೆನಿಸಿತು. ಅಲ್ಲಿ ರಷ್ಯ, ಭಾರತ



ಹಾಗೂ ಫ್ರಾನ್ಸಿನಿಂದ ಬಂದ ಭೂಗತಕ್ರಾಂತಿಕಾರಿಗಳು ಆಶ್ರಯ ಪಡೆಯುತ್ತಿದ್ದರು. ಭೀಕಾಜಿಯವರ ಚಟುವಟಿಕೆಗಳಿಂದ ಆತಂಕಗೊಂಡ ಆಂಗ್ಲರು ಅವರ ಭಾರತ ಪ್ರವೇಶಕ್ಕೂ ತಡೆ ಹಾಕಿದರು. ಹೀಗಾಗಿ ಶ್ರಿಮತಿ ಕಾಮಾ ಪ್ಯಾರಿಸಿನಲ್ಲೆ ೩೫ವರ್ಷ ಇದ್ದರು ಫ್ರಾನ್ಸ್ ಸರಕಾರದಿಂದ ಅವರನ್ನು ವಶಕ್ಕೆ ತೆಗೆದುಕೊಳ್ಳಲು ಆಂಗ್ಲ ಸರಕಾರ ಬಹಳಷ್ಟು ಯತ್ನಿಸಿದರೂ ಸಫಲವಾಗಲಿಲ್ಲ. ಹಾಗೆ ಒಪ್ಪಿಸುತ್ತಿದ್ದರೆ ಭೀಕಾಜೀ ಗುಂಡೇಟಿನಿಂದ ಅಸುನೀಗಬೇಕಿತ್ತು.

ಈ ರೀತಿ ಸರಕಾರದಿಂದ ಸುರಕ್ಷಿತತೆಯ ಭರವಸೆ ಪಡೆದು ಭೀಕಾಜೀ 'ವಂದೇ ಮಾತರಂ' ಎಂಬ ಪತ್ರಿಕೆ ಪ್ರಕಟಿಸಿದರು. ಫ್ರಾನ್ಸ್ ಸರಕಾರಕ್ಕೆ ತೊಂದರೆ ಆಗದಿರಲೆಂದು ಅವರು ಅದನ್ನು ಜಿನೀವಾದಿಂದ ಪ್ರಕಟಿಸಿದರು. ೫ ವರ್ಷ ಕಾಲ ಈ ಪತ್ರಿಕೆ ಭಾರತೀಯ ಸ್ವಾತಂತ್ರ್ಯದ ಕಹಳೆಯಾಡುತ್ತಿತ್ತು.

ಭಾರತೀಯ ತ್ರಿವರ್ಣಧ್ವಜ ಅವರ ವಿಶಿಷ್ಟ ಹಾಗೂ ಚಿರಸ್ಮರಣೀಯ ಕಾರ್ಯ. ಭಾರತೀಯ ಸ್ವಾತಂತ್ರ್ಯದ ಪ್ರತೀಕವಾದ ತ್ರಿವರ್ಣಧ್ವಜದ ಮಾದರಿಯನ್ನು ಭಾರತದಿಂದ ಹೊರಗೆ ಶ್ರೀಮತಿ ಭೀಕಾಜೀಯವರೇ ತಯಾರಿಸಿದ್ದರು. ಭಾಷಣದ ವೇಳೆ ಒಮ್ಮೆ ಭಾವಾವೇಷದಿಂದ ತಮ್ಮ ಸೀರೆಯ ಸೆರಗನ್ನೇ ಕತ್ತರಿಸಿ ಅದನ್ನು ಭಾರತೀಯ ಸ್ವಾತಂತ್ರ್ಯದ ಧ್ವಜದ ರೂಪದಲ್ಲಿ ಅವರು ಉತ್ಸಾಹದಿಂದ ಹಾರಿಸಿದರು. ಇದೇ ನಮ್ಮ ರಾಷ್ಟ್ರಧ್ವಜವೆಂದು ಘೋಷಿಸಿದರು,

ಶ್ರೀಮತಿ ಕಾಮಾರ ವ್ಯಕ್ತಿತ್ವ ಮತ್ತು ಕಾರ್ಯಗಳನ್ನು ಮೆಚ್ಚಿ ಲೆನಿನ ಅವರಿಗೆ ರಷ್ಯಕ್ಕೆ ಬರಲು ಆಮಂತ್ರಣವಿತ್ತರು. ಆದರೆ ಕಾರಣಾಂತರದಿಂದ ಅವರು ಅಲ್ಲಿಗೆ ಹೋಗದಾದರು.

೩೫ ವರ್ಷಗಳ ವರೆಗೆ ಭಾರತದಿಂದ ಹೊರಗಿದ್ದು ನಿರಂತರ ದುಡಿಯುತ್ತಿದ್ದ ಭೀಕಾಜೀ ವೃದ್ಧಾವಸ್ಥೆಯಲ್ಲಿ ಸ್ವದೇಶಕ್ಕೆ ಮರಳಲು ತುಂಬಾ ಹಂಬಲಿಸಿದರು. ರಾಜನೀತಿಯಲ್ಲಿ ಭಾಗವಹಿಸಬಾರದೆಂಬ ಶರ್ತದ ಮೇಲೆ ಬ್ರಿಟಿಷ್ ಸರಕಾರ ಅನುಮತಿ ನೀಡಿತು.

ರೋಗ ಜರ್ಜರಿತ ದೇಹ ಹೊತ್ತು ಈ ಕ್ಷೀಣಕಾಯ ನಾರಿ ನವಂಬರ್ ೧೯೩೫ ರಲ್ಲಿ ಬೊಂಬಾಯಿಗೆ ಬಂದಾಗ, ಅವರನ್ನು ನೇರಾಗಿ ಅಸ್ಪತ್ರೆಗೊಯ್ಯಲಾಯಿತು. ಮುಂದೆ ಸುಮಾರು ೮ ತಿಂಗಳ ತರುವಾಯ ೧೩-೭-೧೯೩೬ರಂದು ಭೀಕಾಜೀ ಅಸುನೀಗಿದರು.

೧೯ನೇ ಶತಮಾನದಲ್ಲಿ ಆಂಗ್ಲರ ಶಕ್ತಿ ಭಾರತ ಇಂಗ್ಲೆಂಡುಗಳಲ್ಲಷ್ಟೇ ಅಲ್ಲ ಇಡೀ ವಿಶ್ವದಲ್ಲೇ ಹರಡಿತ್ತು. ಆ ವೇಳೆ ಭಾರತೀಯ ಪುರುಷರೂ ಬಹಿರಂಗವಾಗಿ ಆಂದೋಲನ ನಡೆಸಲು ಅಳುಕುತ್ತಿದ್ದಾಗ, ನಾರಿಯೊಬ್ಬಳ ಇಂಥ ಸಾಹಸ ನಮಗೆ ಅದ್ಭುತ ಪ್ರೇರಣೆ ಹಾಗೂ ಶಕ್ತಿ ನೀಡಬಲ್ಲುದು. [ಹಿಂದಿಯಿಂದ]

—ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ-583 119

# ಇಂದಿನ ಶಿಕ್ಷಣ ಎತ್ತ ಸಾಗಿದೆ ?

ಇಂದಿನ ಶೈಕ್ಷಣಿಕ ವಾತಾವರಣ ತೃಪ್ತಿಕರವಾಗಿದೆಯೊ? ಶಿಕ್ಷಕ ವೃತ್ತಿಯಲ್ಲಿರುವವರಿಗೆ ನಿಜವಾದ ಸಮಾಧಾನ, ಆತ್ಮ ತೃಪ್ತಿ ಇದೆಯೊ ? ವಿದ್ಯಾರ್ಥಿಗಳಿಗೆ ಕೇವಲ ಪಠ್ಯಪುಸ್ತಕಗಳನ್ನು ಕಲಿಸಿ, Syllabus ಮುಗಿಸಿದ ಮಾತ್ರಕ್ಕೆ ಶಿಕ್ಷಕರ ಕರ್ತವ್ಯ ಮುಗಿಯಿತೆ? ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪಾಸಾದ ಮಾತ್ರಕ್ಕೆ ಶಿಕ್ಷಣದ ಉದ್ದೇಶ ಪೂರ್ಣವಾಯಿತೆ? ವಿದ್ಯಾರ್ಥಿಗಳು ಓದುಬರಹ ಕಲಿತು, ಪರೀಕ್ಷೆ ಪಾಸು ಮಾಡಿ, ಧನ ಸಂಪಾದನೆಗೆ ತೊಡಗಿದರೆ ಮುಗಿಯಿತು, ಶಿಕ್ಷಕರೂ ರಕ್ಷಕರು ತಾವು ಧನ್ಯರಾದವೆಂದು ತಿಳಿಯುತ್ತೇವೆ. ಆದರೆ ಮಕ್ಕಳು ನಿಜವಾಗಿ ಉದಾತ್ತ ಗುಣಗಳನ್ನು ಸರಿಪಡಿಸಿ ಯೋಗ್ಯ ಮನುಷ್ಯರಾಗುತ್ತಿದ್ದಾರೆಯೆ? ಎಂಬುದು ನಮ್ಮ ಗಮನದಲ್ಲಿಲ್ಲ.

ಇಂದಿನ ವಿದ್ಯಾವಂತ ತರುಣರು ದೇಶಕ್ಕೊಂದು ಭೂಷಣವಾಗಿದ್ದಾರೆಯೊ? ಅವರಿಗೆ ಸಿಕ್ಕ ವಿದ್ಯೆಯಿಂದ ಅವರು ಸ್ವಾವಲಂಬಿಗಳಾಗಿ ತಮ್ಮನ್ನು ತಾವು ರಕ್ಷಿಸಿಕೊಂಡು ದೇಶದ ಏಳ್ಗೆಗೆ ದುಡಿಯಬಲ್ಲ ಧೀರರಾಗುತ್ತಿದ್ದಾರೆಯೊ? ಕರ್ತವ್ಯ ನಿಷ್ಠೆಯ ಮನೋಭಾವವನ್ನು ಅವರು ಕಲಿತ ವಿದ್ಯೆ ಅವರಿಗೆ ನೀಡಿದೆಯೊ? ದುಡಿಮೆಯಲ್ಲಿ ಪ್ರೀತಿ ಎಂಬುದು ಸ್ವಾಭಾವಿಕ ಗುಣವಾಗಿ ಇಂದಿನ ಯುವಜನರಲ್ಲಿದೆಯೊ? ಇಂದಿನ ವಿದ್ಯಾರ್ಥಿಗಳ ವಿದ್ಯಾಭಾಸದ ಧ್ಯೇಯೋದ್ದೇಶ ವರ್ತನೆಗಳು ಆಶಾದಾಯಕವಾಗಿವೆಯೊ? ಎಂಬುದರ ಬಗ್ಗೆ ನಾವಿಂದು ಗಂಭೀರವಾಗಿ ವಿಚಾರಿಸಬೇಕಾಗಿದೆ.

ಇಂದಿನ ಬಹುಜನ ವಿದ್ಯಾರ್ಥಿಗಳು ಕಾಪಿ ಮಾಡುವ ಹಕ್ಕನ್ನು ಸ್ಥಾಪಿಸಿಕೊಳ್ಳುತ್ತಿದ್ದಾರೆ. ವರ್ಷದಲ್ಲಿ 9 ತಿಂಗಳ ಅಭ್ಯಾಸಕ್ಕೆ ಗಮನ ಕೊಡದೆ, ಸಿನಿಮಾ, ಮನರಂಜನೆ, ಆಟ-ಓಟ ಅಂತ ಇತರ ದುರ್ವ್ಯಸನಗಳಲ್ಲಿ ಕಾಲ ಕಳೆದು, ಪರೀಕ್ಷೆ ಹತ್ತಿರ ಬಂದಾಗ, ಗೈಡ್ ಖರೀದಿ ಮಾಡಿ, ಪಠ್ಯಪುಸ್ತಕ ಓದದೆ ತೇರ್ಗಡೆ ಹೊಂದಲು ಅನ್ಯಾಯದ ದಾರಿಯಿಂದ ಪಾಸಾಗಲು ಪ್ರಯತ್ನಿಸುತ್ತಾರೆ. ಲಂಚದ ಬಲದಿಂದ ಪರೀಕ್ಷೆಗೆ ಮೊದಲೇ ಪ್ರಶ್ನೆ ಪತ್ರಿಕೆ ಪಡೆದು ಪರಿಶ್ರಮವಿಲ್ಲದೇ ಶೇಕಡಾ 90 ರಷ್ಟು ಅಂಕಗಳನ್ನು ಪಡೆಯುವವರೂ ಇಲ್ಲದಿಲ್ಲ. ಇದು ಇಂದಿನ ಕೆಲ ವಿದ್ಯಾರ್ಥಿಗಳ ಅನೈತಿಕತೆ ಅಶಿಸ್ತಿಗೆ ಸಾಕ್ಷಿ.

ಇನ್ನು ನಗರದಲ್ಲಿ ವಾಸಿಸುವ ಕೆಲವು ವಿದ್ಯಾರ್ಥಿಗಳು, ಕುಡಿತ ಹಾಗೂ ಮಾದಕ ದ್ರವ್ಯ ಸೇವನೆಯ ದುಶ್ಚಟಕ್ಕೆ ಬಲಿಯಾಗಿ, ತಮ್ಮ ಭವಿಷ್ಯವನ್ನೇ ಹಾಳು ಮಾಡಿಕೊಳ್ಳುತ್ತಿದ್ದಾರೆ. ಇತ್ತ ಹಳ್ಳಿಯಲ್ಲಿ ಓದು ಬರಹ ಕಲಿತ ಯುವಕರು ವ್ಯವಸಾಯದಲ್ಲಿ ಆಸಕ್ತರಾಗದೆ ನಗರ ಸೇರಲು ಹಾತೊರೆಯುತ್ತಿದ್ದಾರೆ. ಹೊಲ ಮಾರಿ

ಲಂಚಕೊಟ್ಟು, ನೌಕರಿಗೆ ಸೇರುವವರೂ ಇಲ್ಲದಿಲ್ಲ. "ಕಡಿಮೆ ಶ್ರಮ ಹೆಚ್ಚು ಸಂಬಳ ಇದು ಅವರ ಆದರ್ಶ.

ಇನ್ನು ಶ್ರೀಮಂತರ ಮಕ್ಕಳು ಇಂಜಿನಿಯರಿಂಗ್-ಮೆಡಿಕಲ್ ಓದಿದದವರು ಭಾರತ ಬಿಟ್ಟು ವಿದೇಶಕ್ಕೆ ಎಂದು ಹೋದೇವೆಂದು ಆತುರರಾಗಿದ್ದಾರೆ.

ಹೀಗಾಗಿ ನಮ್ಮ ದೇಶದ ಸುತ್ತಮುತ್ತಲಿನ ಜನರಿಗೆ ಅನುಕೂಲರಾಗಿ ಬದುಕಿನಲ್ಲಿ ಸಾರ್ಥಕ ಕಾಣುವ ಆಸಕ್ತಿ ಬಹುಜನ ಯುವಕರಲ್ಲಿಲ್ಲ;

ಹೀಗಾಗಿ ಇಂದಿನ ಶಿಕ್ಷಣದ ಅವನತಿಯ ಮಟ್ಟ, ನಮ್ಮ ಇಡೀ ಸಮಾಜವನ್ನೇ ಅವನತಿಗೀಡು ಮಾಡುತ್ತಿದೆ ಈ ಎಲ್ಲ ಪರಿಸ್ಥಿತಿಗೆ ಕೇವಲ ವಿದ್ಯಾರ್ಥಿಗಳನ್ನು ದೂರುವುದು ಸರಿಯಲ್ಲ, ದೊಡ್ಡವರೆನಿಸಿಕೊಂಡವರ ಸ್ವಾರ್ಥ; ಸಣ್ಣತನ ಇದಕ್ಕೆ ಕಾರಣವಾಗಿದೆ. ನೈತಿಕ ಪ್ರಜ್ಞೆ ವಿದ್ಯಾವಂತರಲ್ಲೆ ನಾಮಾವಶೇವಾಗುತ್ತಿದೆ ರಾಜಕಾರಣಿಗಳೇ ನೀತಿ ನಿಯಮಗಳನ್ನು ತಿರಸ್ಕರಿಸಿದ್ದಾರೆ, ದೇಶದಲ್ಲಿ ಕೊಲೆ, ದರೋಡೆ ಹೆಚ್ಚಾಗಿದೆ, ಲಂಚಕೋರತನ ಕಾಳಸಂತೆಯ ಕಾರಸ್ಥಾನ ಸರ್ವವ್ಯಾಪಿಯಾಗಿದೆ. ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ. ಶ್ರೀಮಂತರು ಇನ್ನೂ ಹೆಚ್ಚಿನ ಧನದಾಹದಿಂದ ಲಂಚ ವಂಚನೆಗಳಂತ ಕಾರ್ಯಗಳಲ್ಲಿ ಆಸಕ್ತರಾಗುತ್ತಲೇ ಇದ್ದಾರೆ. ಪ್ರತಿಯೊಬ್ಬ ಭಾರತೀಯನು ತನ್ನ ಭವಿಷ್ಯದ ಬಗ್ಗೆ ಯೋಚಿಸಬಲ್ಲನೇ ಹೊರತು ದೇಶದ ಬಗ್ಗೆ ಚಿಂತಿಸಲಾರನು. ತನ್ನ ಮಕ್ಕಳಿಗೆ ಎಷ್ಟು ಆಸ್ತಿ ಪಾಸ್ತಿ ಹಣ ಸಂಗ್ರಹ ಮಾಡಬಹುದು ಎಂಬುದರ ಬಗ್ಗೆ ವಹಿಸುವ ವಿಶೇಷ ಆಸಕ್ತಿಯು ನೂರರಲ್ಲಿ ಒಂದು ಪಾಲನ್ನು ದೇಶದ ಹಿತಚಿಂತನೆಯಲ್ಲಿ ತೊಡಗಿಸಲಾರನು. ದೇಶದ ಸ್ಥಿತಿ ಏನಾದರೇನು ? ನಾನು ನನ್ನ ಮನೆಯ ಜನ ಸುಖವಾಗಿದ್ದರೆ ಸಾಕು ಎನ್ನುವಂತಿದೆ. ಆದಕ್ಕೆಂದೇ ನೆಹರೂ ಅವರು ಒಂದು ಕಡೆ " ಇಂಡಿಯಾ ಎಂಬುದೊಂದಿದೆ. ಆದರೆ ಅಲ್ಲಿ ಒಬ್ಬ ಇಂಡಿಯನ್ ಇದ್ದಾನೆಯೋ? ಎಂಬುದು ತಿಳಿಯಲು ' ಎಂದು ಬಹುನೊಂದು ನುಡಿದಿದ್ದಾರೆ. ರಾಷ್ಟ್ರೀಯ ಪ್ರಜ್ಞೆಯ ಅಭಾವ ನಮ್ಮಲ್ಲಿದೆ. ಇದು ರಾಷ್ಟ್ರದ ಪ್ರಗತಿಗೆ ಮಾರಕವಾಗಿದೆ.

ಒಂದು ರಾಷ್ಟ್ರದ ಉತ್ಸಾಹ, ಶಕ್ತಿ ಮತ್ತು ಭರವಸೆಯ ಪ್ರತೀಕ ಯುವಕರು ಅವರಲ್ಲಿ ಅಡಗಿರುವ ಅದಮ್ಯ ಶಕ್ತಿಯನ್ನು ಯೋಗ್ಯ ಮಾರ್ಗದಲ್ಲಿ ಹರಿಯುವಂತೆ ಮಾಡಲಾಗದಿದ್ದರೆ ನಮ್ಮ ಅಭಿವೃದ್ಧಿಯ ಯೋಜನೆಗಳೆಲ್ಲ ವಿಫಲವಾಗುತ್ತವೆ.

ಯಾವುದಕ್ಕೂ ತನ್ನ ಅರಿವೇ ತನಗೆ ಗುರುವಾಗಬೇಕು. ಈ ಅರಿವು ಜಾಗೃತವಾಗಬೇಕಾದರೆ' ಯೋಗ್ಯ ಶಿಕ್ಷಣ ನೀಡಬೇಕು. ಚಿಕ್ಕಮಕ್ಕಳನ್ನು ಯೋಗ್ಯ ಶಿಕ್ಷಣದಿಂದ ಆರಂಭದಿಂದಲೇ ತಿದ್ದಬಹುದಾಗಿದೆ. "ಮೂರು ವರ್ಷದ ಬುದ್ಧಿ ಸಿದ್ಧಗಂಗಾ



ನೂರು ವರ್ಷ " ಎನ್ನುವುದು ಅನುಭವಸಿದ್ಧಿ ಮಾತಾಗಿದೆ. ಆದರೆ ಇಂದು ಲಭಿಸುತ್ತಿರುವ ಶಿಕ್ಷಣ ಅಪೂರ್ಣವಾಗಿದೆ, ನಿರುದ್ಯೋಗ, ಅಶಿಸ್ತು, ಬಡತನ ಹಾಗೂ ಸಮಾಜ ವಿರೋಧಿ ಚಟುವಟಿಕೆಗಳ ನಿರ್ಮೂಲನೆಗೆ ಸಹಾಯಕವಾದ ಶಿಕ್ಷಣವಾಗಬೇಕಾಗಿದೆ. ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳನ್ನು ಹೆಚ್ಚಿಸುವ ಶಿಕ್ಷಣದ ವ್ಯವಸ್ಥೆಯಾಗಬೇಕಾಗಿದೆ. ಸಚ್ಚಾರಿತ್ರ್ಯವನ್ನು ರೂಪಿಸುವ ಯೋಗ್ಯ ನಾಗರಿಕರನ್ನು ನಿರ್ಮಾಣ ಮಾಡುವ ಶ್ರಮಗಳಿಂದ ಸ್ಫೂರ್ತಿಯನ್ನು ತುಂಬುವ ಸಹನೆ, ಸದ್ಭಾವನೆ, ಪ್ರೇಮ ಹಾಗೂ ಸಹಕಾರ ಮನೋವೃತ್ತಿಯನ್ನು ಬೆಳೆಯಿಸುವ ಮತ್ತು ರಾಷ್ಟ್ರಪ್ರೇಮ ಹಾಗೂ ವಿಶ್ವಬಂಧುತ್ವವನ್ನು ಜಾಗೃತಗೊಳಿಸುವ ಶಿಕ್ಷಣ ಬೇಕಾಗಿದೆ

ಈ ದಿಸೆಯಲ್ಲಿ ತಂದೆ ತಾಯಿಗಳ ಹೊಣೆ, ಶಿಕ್ಷಕರ ಹೊಣೆ ಸರಕಾರದ ಹೊಣೆ, ವಿದ್ಯಾರ್ಥಿಗಳ ಹೊಣೆ ಬಹು ದೊಡ್ಡವಾಗಿವೆ.

—ಪ್ರೊ. ನೀಲಮ್ಮ , ರತ್ನಳ್ಳಿ, ಶಹಾಬಾದ.

## ಸಿದ್ಧಗಂಗೆಯು ಬೆಳಕೆ

ಹರಕರುಣೋದಯದ ಬೆಳಕು
ಇಳೆಗಿಳಿವ ಮುನ್ನ ಕೇಳ್ದ ನಿನ್ನ ಹಾವುಗೆ ದನಿಗೆ
ಜಡವೆಲ್ಲ ಚೇತನ. ಮೌನದಿಂದರಳಿ ಸಾಸವರ
ಬೀರುವುವು ಪುಷ್ಪವನರಾಶಿ.
ಓ, ಕೋಟಿ ಜನರ ಕಲ್ಪತರುವೆ;
ಸಿದ್ಧಗಂಗೆಯಾ ಚಿಚ್ಛಕ್ತಿಯೆ; 'ಕಾಯಕವೇ ಕೈಲಾಸ'
ನುಡಿಯ ಕೃತಿಗೈತಂಡೆ, ಕಾರ್ಡFತ್ತಲ ಕಾಳವನಳಿಸಿದೆ.,
ಜಂಜಾಟ ಜೀವನಕೆ ಅಮೃತವ ಸಿಂಚಿಸಿದೆ ,
ಜಗದ ಬಿರು ಬೇಸಿಗೆಯ ಯಾತ್ರೆಯಲಿ
ಕಲ್ಪವೃಕ್ಷವಾದೆ, ತಣ್ಣೆಳಲ ವಟವೃಕ್ಷವಾದೆ.
ಮುಂದಡಿಯಿಟ್ಟಾಗ, ಕತ್ತಲದು ಕವಿದಾಗ,
ಇಂಬಿಟ್ಟು ಪೊರೆದೆ, ಸರ್ವಸಮತೆಯ ಭಾವ;
ಸರ್ವೇಜನಃ ಸುಖ ಮಂತ್ರಃ ನಿನ್ನುಸಿರು.,
ಬಡತನದ ಬಂಧನವ ಬಿಡಿಸಿ,
ಸಗ್ಗಸಿರಿಯಿಳೆಗಿಳಿಸಿ ನೋವನಳಿಸಿ,
ನಗೆಯ ತಂದೆ ನಿನ್ನ ಸಾಧನೆ ನಿಲವು
ದಿಗ್ದಿಗಂತ ವ್ಯಾಪ್ತಿ, ತಲ್ಲಣಿಪಮನಕದರಿಂ
ಹರುಷಪ್ರಾಪ್ತಿ ಸಿದ್ಧಗಂಗೆಯು ಬೆಳಕೆ
ನಿನ್ನ ವಾತ್ಸಲ್ಯವಾಹಿನಿಯಲಿ,
ಜಗವು ಪುನೀತ, ತೃಪ್ತ, ಸಂತೃಪ್ತ.

—ರಾಜೇಂದ್ರಶಿಶು, 242, ಉತ್ತರಾದಿಮಠದ ರಸ್ತೆ, ಮೈಸೂರು-4

## ನಮ್ಮೊಳಗಿನ ಹಗೆ

ವ್ಯಕ್ತಿಯೊಬ್ಬ ಭಗವಂತನನ್ನು ತಪಸ್ಸಿನಿಂದ ಒಲಿಸಿಕೊಂಡ ಒಲಿದ ದೇವರೊಂದಿಗೆ, "ಈ ಜಗತ್ತಿನಲ್ಲಿ ನನಗೆ ಅನೇಕ ಮಂದಿ ಹಗೆಗಳಿದ್ದಾರೆ. ನಿನ್ನ ಚಕ್ರಾಯುಧವನ್ನು ನನಗೆ ದಯಪಾಲಿಸಿದರೆ ನನ್ನ ವೈರಿಗಳನ್ನೆಲ್ಲ ನಾಶ ಮಾಡಿಕೊಳ್ಳುತ್ತೇನೆ" ಎಂದು ಪ್ರಾರ್ಥಿಸಿದ. ಮುಗುಳ್ನಗುತ್ತ ದೇವರೇನೋ ತನ್ನ ಚಕ್ರಾಯುಧವನ್ನು ಅವನಿಗೆ ನೀಡಿದ. ತನ್ನ ವೈರಿಗಳನ್ನು ನಾಶ ಮಾಡಲು ಆತ ಚಕ್ರದೊಂದಿಗೆ ಆಜ್ಞಾಪಿಸುತ್ತಲೇ ಅದು ಅವನನ್ನೇ ತರಿದು ಹಾಕಲು ಓಡಿಸಿಕೊಂಡು ಬಂದಿತು. ವ್ಯಕ್ತಿಯು ಕಂಗೆಟ್ಟು "ದೇವಾ ಇದೇನಿದು, ನನ್ನ ಹಗೆಗಳನ್ನು ಕೊಲ್ಲು ಎಂದರೆ ಈ ಚಕ್ರ ನನ್ನನ್ನೇ ಧ್ವಂಸ ಮಾಡಲು ಮುಂದೊತ್ತುತ್ತಿದೆಯಲ್ಲ. ನ್ಯಾಯವೇ ?" ಎಂದು ಕೂಗಿದ.

ಭಗವಂತ ಉತ್ತರಿಸಿದ, "ನಿನ್ನ ಹಗೆಗಳು ಹೊರಗೆಲ್ಲೂ ಇಲ್ಲ. ಅವರೆಲ್ಲರೂ ಕಾಮ, ಕ್ರೋಧವೇ ಮೊದಲಾದ ಅರು ಬಗೆಗಳಾದ ನಿನ್ನೊಳಗೆಯೇ ನೆಲೆಸಿದ್ದಾರೆ. ಆದ್ದರಿಂದ ಅವರನ್ನು ಕೊಲ್ಲಲು ಚಕ್ರ ನಿನ್ನ ಬಳಿಗೆ ಬರುತ್ತಿದೆಯೇ ವಿನಾ ನಿನ್ನನ್ನು ಕೊಲ್ಲಲು ಅಲ್ಲ.

ನಿಜವಾಗಿ ನೋಡಿದರೆ, ನಮಗಾರು ಹಗೆಗಳು ? ಹಳದಿ ರೋಗವಾದವನ ದಿಟ್ಟಿಗೆ ಎಲ್ಲೆಡೆಯೂ ಅರಿಶಿನ ಬಣ್ಣವೇ ಕಾಣುವಂತೆ ಅಂತರಂಗದ ಚಕ್ಷುಗಳಿಗೆ ಮದ ಮಾತ್ಸರ್ಯದ ರೋಗಬಾಧೆ ತಟ್ಟಿದರೆ ಮೈತ್ರಿಭಾವದ ಬದಲು ಎಲ್ಲೆಡೆಯೂ ಶತ್ರುಗಳೇ ಕಾಣಿಸಬಹುದು. ತಿಳುವಳಿಕೆಯ ಒಳಗಣ್ಣು ತೆರೆದಾಗ ಮನುಷ್ಯ ಅಜಾತಶತ್ರುವೆನಿಸಲು ಕಷ್ಟವೇ ಇಲ್ಲ.

"ಜನ್ಮನಾ ಜಾಯತೇ ಜಂತು: ಕರ್ಮಣಾ ಜಾಯತೇ ಮನು:" ಎಂದು ಹೇಳಿರುವ ಋಷಿಗಳು ಹುಟ್ಟಿನಿಂದ ಯಾವನಿಗೂ ಜಾತಿ ಸೃಷ್ಟಿಯಾಗುವುದಿಲ್ಲ, ಆತ ಜನ್ಮದಿಂದ ಬರೇ ಪ್ರಾಣಿಯಾಗಿರುತ್ತಾನೆ. ಆತನೆಸಗುವ ಸತ್ಕರ್ಮಗಳೇ ಅವನನ್ನು ಮನುಷ್ಯನನ್ನಾಗಿ ಮಾಡುತ್ತವೆ ಎಂದಿದ್ದಾರೆ. ಕಣ್ಣು ಮೂಗು ಆಕಾರಗಳಿಂದಾಗಲಿ ಮಾತನಾಡಬಲ್ಲ ಎಂಬ ವಿಶೇಷತೆಯಿಂದಾಗಲೀ ಮನುಷ್ಯನೆಂದು ಕರೆಯಲ್ಪಡುವುದಿಲ್ಲ. ರಾಗದ್ವೇಷಗಳಿಗೆ ಬಲಿಯಾಗಿ ಹಗೆತನವನ್ನು ಬೆಳೆಸಿಕೊಂಡು ಕೇರಿ ಕೇರಿಗಳಲ್ಲಿ ಜ್ವಾಲೆ ಉರಿಸಿ ಸೃಷ್ಟಿ ನಿಯಾಮಕನ ಸಂವಿಧಾನವನ್ನು ತಲೆಕೆಳಗು ಮಾಡುವವನಂತೂ ಮನುಷ್ಯ ಅನಿಸಲಾರ.

ಒಬ್ಬನ ಮೇಲೆ ಹಗೆತನ ಬರಲು ನಮ್ಮೊಳಗಿನ ಹಗೆಗಳೇ ಕಾರಣರಲ್ಲವೆ ? ಆತನಲ್ಲಿ ಹಗೆತನ ಮೂಡಿಸುವುದು ನಮ್ಮಲ್ಲಿರುವ ಆಶೆಗಳು, ಲೋಭತನ, ಸೊಕ್ಕು, ಮೋಹ, ಮಾತ್ಸರ್ಯ ಇದರೊಂದಿಗೆ ಕ್ರೋಧ ಬಂದುದೆಲ್ಲ ಬರಲಿ ಬಿಡು ಎಂಬ ನಿರ್ಲಿಪ್ತ ಭಾವದಿಂದ ಇದ್ದರೆ ಅದು ಗೌರವಕ್ಕೆ ಕುಂದು ಎಂಬ ದುರಭಿಮಾನ. ಭಗವಾನ್ ಬುದ್ಧ ಭಿಕ್ಷೆ ಬೇಡುತ್ತಾ ಒಬ್ಬ ಧನಿಕನ ಮನೆಗೆ ಹೋದಾಗ ಭಿಕ್ಷೆ ಹಾಕದೆ ಆತ ವಾಚಾಮ ಗೋಚರವಾಗಿ ಬೈದ. ಎಲ್ಲವನ್ನು ಆಲಿಸಿದ ಬಳಿಕ ಬುದ್ಧ ಶಾಂತ ಭಾವದಿಂದ ಅವನಿಗೊಂದು ಪ್ರಶ್ನೆ ಕೇಳಿದ. "ನಿನಗೆ ಒಂದು ವಸ್ತು ಬೇಡ ಅನಿಸಿರುತ್ತದೆ. ಅದನ್ನು ಒಬ್ಬ ಬಲವಂತವಾಗಿ ನಿನಗೆ ಕೊಟ್ಟನೆಂದಾದರೆ ನೀನೇನ್ಮಾಡ್ತೀಯಾ ?" ಅದಕ್ಕೆ ಅವನು "ಬೇಡವೆಂದುದನ್ನು ಒತ್ತಾಯಿಸಿ ಕೊಡಲು ಬಂದರೆ ತಿರುಗಿ ಅವನ ಮುಖಕ್ಕೆ ಅಪ್ಪಳಿಸಿಯೇನು" ಎಂದನು.

ಬುದ್ಧನು ಮುಗುಳ್ನಕ್ಕ "ನನಗೂ ಅಷ್ಟೆ. ನನಗೆ ನಿನ್ನ ಬೈಗಳುಗಳು ಬೇಡ ಹಾನದನ್ನು ಸ್ವೀಕಾರ ಮಾಡುವುದಿಲ್ಲ. ನೀನೇ ಕೊಟ್ಟ ಈ ವಸ್ತುಗಳನ್ನು ನೀನೀಗ ಏನ್ಮಾಡ್ತೀಯಾ ?" ಶಾಂತವಾಗಿ ಕೇಳಿದ ಅವನಿಗೆ ತನ್ನ ಅಚಾತುರ್ಯದ ಅರಿವಾಯಿತು. ಪಶ್ಚಾತ್ತಾಪಪಟ್ಟ.

ಭಗವಾನ್ ಬುದ್ಧ ಜನಿಸಿದ ನಾಡಿನವರಾದ ನಮಗೆ ಇದು ತಿಳಿಯಬೇಡವೆ ? ಇನ್ನೊಬ್ಬನಿಂದ ಕ್ರೋಧವು ಕೊಡುಗೆಯಾಗಿ ಬಂದಾಗ ನಾವದನ್ನು ಸ್ವೀಕರಿಸದೆ ಸುಮ್ಮನೆ ಇದ್ದರೆ ಹಗೆತನದ ಕಿಚ್ಚು ಹುಟ್ಟಲು ಎಡೆಯಿಲ್ಲ. ಚಾಂಡಾಲನೆಂಬವ ಪ್ರತ್ಯೇಕ ಇಲ್ಲ, ನಮ್ಮ ಮೈಯಲ್ಲಿ ಹುಟ್ಟುವ ಕೋಪವೇ ನಮ್ಮನ್ನು ಅಪವಿತ್ರಗೊಳಿಸುವ ಅಸ್ಪೃಶ್ಯನೆಂದು ಶಂಕರಾಚಾರ್ಯರು ಅರಿತುಕೊಂಡರು. ಹೊಲೆಯ ಹೊರಗೇಕೆ ಊರೊಳಗಿಲ್ಲವೆ ? ಎಂದು ಪ್ರಶ್ನಿಸಿದ ಪುರಂದರದಾಸರು ಹಗೆತನ ಸಾಧಿಸುವವನನ್ನು ಮುಟ್ಟಲಾಗದವರ ಸಾಲಿಗೆ ಸೇರಿಸಿ, ಮಾನವ ಜನ್ಮ ಬಲು ದೊಡ್ಡದು, ಇದಕ್ಕೆ ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ ಎಂದರು. ಅಂದರೆ ಈ ಬದುಕು ಹಗೆತನ, ವೈಷಮ್ಯ ಸಿದ್ಧಿಗಾಗಿ ಸೃಷ್ಟಿಯಾಗಿಲ್ಲ. ಅದು ಅಷ್ಟೊಂದು ದೀರ್ಘವೂ ಅಲ್ಲ. ಅತ್ಯಲ್ಪ ಕಾಲ ಬದುಕಿದರೂ ಮೋಕ್ಷ ಸಾಧಕವಾಗುವಂಥ ಭಗವಂತನ ನಾಮಸ್ಮರಣೆ ಮಾಡಿ ಉತ್ತಮನೆನಿಸಿಕೊಂಡಿರು ಎಂಬ ನೀತಿಯನ್ನು ಸಾರಿದ್ದಾರೆ.

ದೀಪವನ್ನು ಮೇಲಕ್ಕೇರಿಸಿದಷ್ಟೂ ಅದರ ಬೆಳಕು ವಿಸ್ತಾರವಾದ ಪ್ರದೇಶವನ್ನು ತಲುಪುವಂತೆ ನಮ್ಮ ದೃಷ್ಟಿ ವೈಶಾಲ್ಯ ಹೊಂದಿದಷ್ಟೂ ಅರಿವಿನ ಪ್ರಕಾಶ ಹೆಚ್ಚುತ್ತದೆ. ಇನ್ನೊಬ್ಬರ ಗುಣ ನಡತೆಯಲ್ಲಿ ವಿಪರೀತ ಅರ್ಥ ಕಲ್ಪಿಸಿ ಹಗೆತನ ಬೆಳೆಸಿಕೊಳ್ಳುವವರಿಗೆ



ಕ್ಷುಲ್ಲಕ ಬದುಕಿಗಾಗಿ ಪರಹಿಂಸೆ ಬೇಡ ಎಂಬ ವಿಚಾರ ಗೋಚರವಾಗುತ್ತದೆ. ಕೈಗಳೆರಡೂ ಸೇರದೆ ಚಪ್ಪಾಳೆಯಾಗುವುದಿಲ್ಲ. ಸಂಕುಚಿತ ಹೃದಯಿಯಾದವನಿಂದ ಮನ ನೋಯಿಸುವ ಪ್ರತಿಕ್ರಿಯೆ ಬಂದಾಗಲೂ ನಾವು ಮೌನವಾಗಿದ್ದರೆ ಆತ ಇದು ದೌರ್ಬಲ್ಯವೆಂದು ಪರಿಗಣಿಸಿ ನಮ್ಮನ್ನು ಸಣ್ಣವರೆಂದು ತಿಳಿದುಕೊಂಡಾನು. ಆದರೇನಂತೆ ನಾವು ನಮ್ಮಲ್ಲಿನ ಕ್ರೋಧ ಎಂಬ ಮಹಾನ್ ರಕ್ಕಸನನ್ನು ಗೆದ್ದು ಕೊಂಡು ದೊಡ್ಡವರಾಗಿರುವುದು ಅವನರಿಯನೆ ? ತನ್ನಲ್ಲಿರುವ ತಪ್ಪನ್ನು, ಇನ್ನೊಬ್ಬರಲ್ಲಿರುವ ಗುಣಾಂಶವನ್ನು ತಿಳಿದುಕೊಂಡವನೇ ದೊಡ್ಡವನು. ಬಸವಣ್ಣನವರು ಅಂಥ ಮಹಾನುಭಾವರಾದದ್ದರಿಂದಲೇ ಎನಗಿಂತ ಕಿರಿಯರಿಲ್ಲ ಎಂದರು.

ನಮ್ಮ ದೇಹ ಮಲಿನದ ಕೂಪ ರೋಗ, ಕಲ್ಮಶಗಳೊಂದಿಗೆ ಬದುಕಿನ ಶಾಂತಿ ಕೆಡಿಸಬಲ್ಲ ರಾಗದ್ವೇಷಾದಿಗಳ ತವರು. ಈ ರೂಪದಲ್ಲೂ ಒಂದು ಅಮೃತ ಕುಂಭ ಇದೆ. ಅದು ಆತ್ಮ. ಧರ್ಮಾರ್ಥ ಕಾಮಂಗಳಲ್ಲಿ ಧರ್ಮವು ಭಗವಂತನಿಗೆ ಸಂಬಂಧಿಸಿದೆ. ಇದನ್ನು ಪಡೆದರೆ ಕಡೆಗೆ ಸಿಗುವ ಮೋಕ್ಷವನ್ನು ಹೊಂದುವುದೇ ಮಾನವನೆನಿಸಿದವನ ಗುರಿ. ಈ ಗುರಿಯ ಬದಲು ಅರ್ಥ, ಕಾಮಗಳನ್ನಷ್ಟೇ ಹಂಬಲಿಸುವ ಮನುಷ್ಯ ವಿವಂಚನೆಗೊಳಗಾಗುತ್ತಾನೆ, ಇದಕ್ಕಾಗಿ ತನ್ನವರನ್ನು ದ್ವೇಷಿಸುತ್ತಾನೆ, ಕೊಲ್ಲುತ್ತಾನೆ, ಭ್ರಾತೃಭಾವವನ್ನು ಮರೆಯುತ್ತಾನೆ, ದಾನ ಧರ್ಮಾದಿಗಳನ್ನು ಕೈಬಿಡುತ್ತಾನೆ, ನಿರಪರಾಧಿಗಳನ್ನು ಹಿಂಸಿಸುತ್ತಾನೆ.

ಅನ್ಯರ ಮನೆಯಲ್ಲಿ ಉರಿದ ಕಿಚ್ಚು ತನ್ನ ಮನೆಗೆ ಹರಡಬಾರದಂದೇನೂ ಇಲ್ಲ. ಈ ಅಮಾನವೀಯ ಗುಣಕ್ಕೆ ಎಡೆಯಾಗಿ ತನ್ನೊಳಗಿನ ಹಗೆಗಳನ್ನು ನಿಯಂತ್ರಿಸಲಾಗದ ಮನುಷ್ಯ ಕೊನೆಗೆ ತಾನೇ ಅವುಗಳಿಗೆ ಬಲಿಯಾಗುತ್ತಾನೆ. ಹೀಗಾಗ ಬಾರದು. ಮೊದಲೇ ವಿವೇಕವನ್ನು ಜಾಗೃತಗೊಳಿಸಿಕೊಳ್ಳಬೇಕು.

—ಪ. ರಾಮಕೃಷ್ಣ ಶಾಸ್ತ್ರಿ, "ಶಿವಶಕ್ತಿ ನಿಲಯ" ಮುಚ್ಚಿನ–574 295, ದ. ಕ.

---

## ವಚನ

ಹತ್ತಿ ಕದಿರು ರಾಟೆಯಲ್ಲಿ ಮೊದಲಿಲ್ಲ, ನೂಲುಂಟು.
ಸೆಲದಿಯ ಹೃದಯದಲ್ಲಿಯೇ ನೂಲುಂಟು. ಭಕ್ತರ ಭಾವದಲ್ಲಿ ಲಿಂಗವುಂಟು.
ರೇಕಣ್ಣ ಪ್ರಿಯನಾಗಿನಾಥನ ಶರಣರ ಮನದ ಕೊನೆಯನೆತ್ತಿದರೆ,
ಲಿಂಗದ ಗೊಂಚಲುಂಟು ! ಗೊಹೇಶ್ವರಾ.

# ನಾಡ ಶಾಲೆಗಳಲ್ಲಿ ಕೃಷಿಯಾಗುತ್ತಿರುವ ಜಪಾನಿನ ಕರಕುಶಲ ಕಲೆ 'ಒರಿಗೆಮಿ'

ನಾಡ ಕರಕುಶಲ ಕಲೆಗಳಲ್ಲಿ ಪ್ರಾಂತೀಯ ಪರಿಧಿಗಷ್ಟೇ ಸೀಮಿತ. ಹೊರ ನಾಡಲ್ಲಿ ಪಾದಾರ್ಪಣವಾಗುವುದು ಅಪರೂಪ. ಜಪಾನಿನ ಕರಕುಶಲ ಕಲೆ ಒರಿಗೆಮಿ ಭಾರತೀಯ ನೆಲದ ಮೇಲೆ ತಳವೂರಿದ್ದನ್ನು ಹಲವರಿಗೆ ತಿಳಿಯದು. ನೂತನ ಪಠ್ಯ ಕ್ರಮ ಸೃಜನಶೀಲ ಚಟುವಟಿಕೆಗೆ ಅಧಿಕ ಒತ್ತು ನೀಡಿರುವುದರಿಂದ ಕಾರ್ಯಾನುಭವ ವಿಷಯ ಬೋಧಿಸುವಾಗ ಒರಿಗೆಮಿ ಕಲಿಕೆಗೆ ಅವಕಾಶ ಗಿಟ್ಟಿಸಿಕೊಳ್ಳಲಾಗುತ್ತಿದೆ. ರಾಜ್ಯ ವಿಜ್ಞಾನ ಪರಿಷತ್ತು ಶಾಲಾ ಉಪಾಧ್ಯಾಯರಿಗಾಗಿ ಒರಿಗೆಮಿಯ ಕಾರ್ಯಾಗಾರವನ್ನು ವ್ಯವಸ್ಥೆಗೊಳಿಸುತ್ತಿದೆ. ತರಬೇತಿ ಹೊಂದಿದ ಶಿಕ್ಷಕರು ತಂತಮ್ಮ ಶಾಲೆಗಳಿಗೆ ತೆರಳಿ ಒರಿಗೆಮಿಯನ್ನು ಕಲಿಸುವರು. ನೂತನ ಶಿಕ್ಷಣ ನೀತಿ ಅಡಿಯ ಪಠ್ಯ ಕ್ರಮದಲ್ಲಿ ಎಲ್ಲಿಯೂ ಒರಿಗೆಮಿಗೆ ಸ್ವಾಗತ ಕೋರಲು ಅಪಾರ ಅವಕಾಶವಿದೆ.

**ಜಪಾನಿನಲ್ಲಿ ಹೂವಾಗಿ ಅರಳಿದ ಕಲೆ:**

ಆಕರ್ಷಕ ಬಣ್ಣದ ಚೌಕಾಕಾರದ ಕಾಗದದ ಮೇಲೆ ಕತ್ತರಿಯನ್ನು ಪ್ರಯೋಗಿಸದೆ ಅಂಟೂ ಹಚ್ಚದೆ ಕೇವಲ ಅದನ್ನು ಮಡಚಿ ಒತ್ತಿ ಅಡಚಿ ಮನಮೋಹಿಸುವ ಮಾದರಿಗಳನ್ನು, ಹೂಗಳನ್ನು ತಯಾರಿಸುವ ಕಲೆ ಒರಿಗೆಮಿಯಾಗಿದೆ. ಕಲೆ ಹುಟ್ಟು ಕಂಡದ್ದು ಚೀನಾದಲ್ಲಾದರೂ 6 ನೇ ಶತಮಾನದಲ್ಲಿ ಜಪಾನಿನಲ್ಲಿ ಕಲೆ ಪರಿಪಕ್ವತೆ ಹೊಂದಿದುದರಿಂದ ಜಪಾನಿನ ಕಲೆ ಎಂದೇ ಜಗಜನಿತ. ಮೊದಮೊದಲು ಈ ಕಲೆ ವಿಶೇಷ ಸಾಂಸ್ಕೃತಿಕ ಸಮಾರಂಭ ಉತ್ಸವ ಕಾಲದಲ್ಲಿ ಮಾತ್ರ ಪ್ರದರ್ಶನಗೊಳ್ಳುತಿತ್ತು. ಇಂದು ಅನೇಕ ಶಾಲೆಗಳಲ್ಲಿ ಒರಿಗೆಮಿ ಕಲಿಸಲಾಗುತ್ತಿದೆ. ಕಲೆಯನ್ನು ವಿಶ್ವದಾದ್ಯಂತ ಪರಿಚಯಿಸಲು " ಲಾಂಗ್ವೇಜ ಒಫ್ ಸಿಂಬೋಲ ಎಂಡ್ ಸೈನ್ಸ್ " ಎಂಬ ಪುಸ್ತಕ ಪ್ರಕಾಶನಗೊಂಡಿದೆ. ದೆಹಲಿಯ ವಿಜ್ಞಾನ ಹಾಗೂ ತಂತ್ರಜ್ಞಾನ ಸಂಹನ ಮಂಡಳಿ ಜಯಪುರದ ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆ ಒರಿಗೆಮಿ ಕಲೆಯನ್ನು ಅಭಿವೃದ್ಧಿ ಪಡಿಸಲು ಮತ್ತು ಜನಪ್ರಿಯಗೊಳಿಸಲು ಪ್ರಯತ್ನಿಸುತ್ತಿದೆ. ಕಾರ್ಯಗಾರ ನಡೆಸಲು ಪರಿಣಿತರ ಹಾಗೂ ಧನ ಸೌಲಭ್ಯ ನೀಡುತ್ತಿದೆ. ಹೊನ್ನಾವರದ ವಿಜ್ಞಾನ ಪರಿಷತ್ತು ಘಟಕ ಮೂವತ್ತು ಶಾಲಾ ಶಿಕ್ಷಕರಿಗೆ ಕಾರ್ಯಾಗಾರ ನಡೆಸಿ ತರಬೇತಿ ನೀಡಿ ಬೋಧನಾ ಕಾರ್ಯಗಳಿಗೆ ಅಣಿಗೊಳಿಸಿರುವದು ಪ್ರಶಂಸಾರ್ಹ. ಜಪಾನಿನ ಜಾನಪದ ಕರಕುಶಲ ಕಲೆ ಕಲಿಯುವ ಮಕ್ಕಳಿಗೆ ನಲಿದಾಡಿಸಲು ಪರಿಸರ ಶಾಲೆಗಳಲ್ಲಿ ಸೃಷ್ಟಿಸಿದೆ. ಮಕ್ಕಳು ತಮ್ಮದಾಗಿರುವ ವೈವಿಧ್ಯಪೂರ್ಣವಾದ ಕಲ್ಪನೆಯನ್ನು ಕಾಗದದಲ್ಲಿ ಕಲೆಯಾಗಿ ಅರಳಿಸಬಹುದು. ಕಲ್ಪನೆಯೇ ಕಲೆಗಾಗಿರುವ ತಿರುಳು. ಅದು ಕಾಗದ ಮಾಧ್ಯಮವಾಗಿಸಿ ಕಲಾಕೃತಿಯಾಗಿ ಅರಳಿಸುವುದು.

ಒರಿಗೆಮಿಯಲ್ಲಿ ಗಣಿತದ ತತ್ವಗಳು ಖಂಡಿತವಾಗಿ ಅಳವಡಿತವಾಗಿದೆ. ಅನೇಕ ಸೃಷ್ಟಿ ವೈಚಿತ್ರ್ಯಗಳನ್ನು ಒರಿಗೆಮಿಯ ಮೂಲಕ ಛದ್ಮಿಸಬಹುದಾಗಿದೆ. ಒರಿಗೆಮಿ ಗಣಿತವನ್ನು ಸೌಂದರ್ಯ ಹಾಗೂ ಮೋಜಿನೊಂದಿಗೆ ಬೆಸೆಯುತ್ತದೆ. ಹಲವು ಕೀಲುಗಳಿಂದಾದ ಕಾಲುಗಳನ್ನು ಹೊಂದಿರುವ ಏಡಿಯನ್ನು ಒಂದೇ ಚೌಕ ಕಾಗದದಿಂದ ತುಂಡರಿಸದೆ ತೋರಿಸಬಹುದು. ಗಿಳಿ, ಗರಿಗೆದರಿದ ನವಿಲು, ಹೂಮಾಲೆ, ಕಿವಿಯಾಡಿಸುವಮೊಲ, ಎಲೆದೇಟುಗಳ ನಡುವಿಂದ ಅರಳಿ ನಿಂತ ಹೂವು, ಬಾತುಕೋಳಿ, ಹಂಸ, ಮರಿಮುಂಗ ತೇಲುದೋಣಿ, ನಾವೆಯಂತಿದ್ದ ಪೆಟ್ಟಿಗೆ, ಜಿಗಿದಾಡುವ ಕಪ್ಪೆ, ಮೀನಾಕಾರದ ಬಲೂನ್ ಗುಡಿಸಲು, ಪಾತರಗಿತ್ತಿ, ಕಸಬುಟ್ಟಿ, ಚಲಿಸುವ ಹಕ್ಕಿ ಮತ್ತು ಚೆಂಡಾಭರಣದಂಥ ಸಹಸ್ರಾರು ಕಾಗದ ಕೃತಿ ನಿರ್ಮಿಸಲು ಸಾಧ್ಯಕಲ್ಪನೆಗಳಿದ್ದಷ್ಟು ಆಕೃತಿಗಳಿವೆ. ಇವೆಲ್ಲ ಸಾಧನೆಗೆ ಕಲಾವಿದಂಲ್ಲಿ ತಾಳ್ಮೆ ಕಲ್ಪನೆಗಳಿದ್ದಷ್ಟು ಒಳ್ಳೆಯದು.

ನೂತನ ಪಠ್ಯಕ್ರಮದಲ್ಲಿ ಸೃಜನಶೀಲತೆ ಹಾಗೂ ಪ್ರಯೋಗಶೀಲತೆಗೆ ಹೆಚ್ಚೆಟ್ಟು ಒತ್ತು ನೀಡಿರುವುದರಿಂದ ಯಾವ ವಿಷಯ ಬೋಧನೆಗೂ ಒರಿಗೆಮಿಯನ್ನು ಬಳಸಬಹುದು. ಕೈ ಬೆರಳುಗಳ ತೀವ್ರ ಕೌಶಲ್ಯ ಮತ್ತು ಮೆದುಳಿನ ಐಚ್ಛಿಕ ಕ್ರಿಯೆಯ ಸಂಯೋಜನೆ ಪಾತ್ರ ಕಲೆಯಲ್ಲಿ ವಿಸ್ಮಯಕಾರಿ, ಬೆರಳುಗಳ ನಡುವಣ ಚಲನಶೀಲತೆ ಮತ್ತು ಹೊಂದಾಣಿಕೆ ಕೌಶಲ್ಯ ಕರಗತವಾಗಿಸಿಕೊಳ್ಳಲು ನೇರ ಅನುವಾಗಿರವುವು. ಒರಿಗೆಮಿಯಲ್ಲಿನ ಸಮತೋಲನತೆ, ಸಮಮಿತಿ, ಸಾಮರಸ್ಯ ರಂಜನೀಯ ಕಲ್ಪನೆ ವಿದ್ಯಾರ್ಥಿಗಳಿಗೆ ನೀಡುತ್ತದೆ. ಆರ್ಥಿಕ ಹಾಗೂ ಸೌಂದರ್ಯದ ಕಲ್ಪನೆಗಳು ಸ್ವಾಭಾವಿಕ ಸಂಪನ್ಮೂಲಗಳ ನ್ಯಾಯೋಚಿತ ಬಳಕೆಯಲ್ಲಿ ಸಹಾಯಕಾರಿ, ಪರಿಸರದಲ್ಲಿನ ನೈಜತೆಯನ್ನು ಸಂರಕ್ಷಿಸಿಡುವುದರಲ್ಲಿ ಮಹತ್ವದ ಪಾತ್ರ ವಹಿಸುವುದು, ವಯಸ್ಕರ ಶಿಕ್ಷಣದಲ್ಲಿ ಅದರಲ್ಲೂ ವಿಶೇಷವಾಗಿ ಹೊಲಿಗೆ ಮರಗೆಲಸಗಳಿಂದ ಮಾಡುವಾಗ ಕರಕೌಶಲ್ಯ ಬೆಳವಣಿಗೆಗೆ ಒರಿಗೆಮಿ ಸಮರ್ಥವಾಗಿ ಅನ್ವಯಿಸಬಹುದು. ಒರಿಗೆಮಿಯಲ್ಲಿ ಬರುವ ರೇಖೆ, ಆಕಾರ, ರೂಪ ಹಾಗೂ ಕೋನಗಳು ನೈಜ್ಯತೆಯ ಪ್ರತೀಕ ವಿದ್ಯಾರ್ಥಿಗಳಲ್ಲಿರುವ ಮನೋದೌರ್ಬಲತೆ ಹಾಗೂ ಕೆಲ ಅಂಗವಿಕಲತೆ ನಿವಾರಿಸಲು ಇದನ್ನು ಚಿಕಿತ್ಸಾ ವಿಧಾನವಾಗಿ ಬಳಸಲಾಗುವುದು. ಮಾದಕ ದ್ರವ್ಯ ವ್ಯಸನಿಯನ್ನು ಅವನ ಸಾಮಾನ್ಯ ಜೀವನಕ್ಕೆ ಮರಳಿಸುವಲ್ಲಿ ಒರಿಗೆಮಿಯ ಸಹಾಯ ತೆಗೆದುಕೊಳ್ಳಲುಸಾಧ್ಯ. ಶುಭಾಶಯ ಪತ್ರಗಳಿಗೆ ಆಕರ್ಷಕ ಮೆರಗನ್ನು ನೀಡಲು ಕಲೆ ಸಹಾಯ ಹಸ್ತ ನೀಡುವುದು. ಒರಿಗೆಮಿಯ ಬಳಕೆ ಎಲ್ಲಿ ಮಾಡಬಹುದೆಂಬ ಅರಸಿಕೆ ಕಲಾವಿದನ ಕಲ್ಪನೆಯ ಮೇಲೆ ಬಹುತೇಕವಾಗಿ ಅವಲಂಬಿಸಿದೆ.

ಒರಿಗೆಮಿಯ ನೆರವಿನಿಂದ ಆಟಿಕೆಗಳನ್ನು, ಆಕರ್ಷಕ ವಸ್ತುಗಳನ್ನು ತಯಾರಿಸಿ ಮಾರಿದ್ದಲ್ಲಿ ಕಲಿಕೆಯ ಜೊತೆ ವಿದ್ಯಾರ್ಥಿಗಳಿಗೆ ಗಳಿಕೆಯೂ ಸಾಧ್ಯ. ವೃತ್ತಿ ಶಿಕ್ಷಣಕ್ಕೆ

(34 ನೇ ಪುಟ ನೋಡಿ



## ಶ್ರೀ ಸಿದ್ಧಗಂಗಾ ಶ್ರೀಗಳವರು

ನಿರ್ಮಲ ಪರಿಸರದ ಸಿದ್ಧಗಂಗೆಯ ಕ್ಷೇತ್ರ
ತೂರ್ಮಗಡಿಯ ಕರುನಾಡಿನ ಪ್ರಗತಿಗೆ ಸಾಧಕ ಕ್ಷೇತ್ರ
ಕರ್ಮವನ್ನಾಚರಿಸಿ ಧರ್ಮವ ಪರಿಪಾಲಿಸಲು ಅವಿಮುಕ್ತ ಕ್ಷೇತ್ರ
ಕರ್ಮಯೋಗಿಗಳನು ತಯಾರಿಸುವ ಕಾರಖಾನೆಯಂತೆ ಪಾತ್ರ
ನಿರ್ಮಲಾಂತಃಕರುಣ ಗುರುಕರುಣೆಗಾಗಿ ಹಂಬಲಿಸಿ ಬರುವ
ಭಕ್ತರ ಗಾತ್ರ

ಹಸಿರು ಹಸಿರಾಗಿ ಶೋಭಿಸುವ ಈ ಕ್ಷೇತ್ರ
ಬಸಿರು ಕನ್ನಡಾಂಬೆಯ ದಿವ್ಯವಾದುದೀ ಕ್ಷೇತ್ರ
ಕೆಸರು ಕೈಯಲಿ ದುಡಿದ ಕನ್ನಡ ವೀರರ ಅವಿರತ ಪಾತ್ರ
ಸಿದ್ಧ ಹಸ್ತದ ಶುದ್ಧ ಚಾರಿತ್ರ್ಯದ ಶ್ರೀಗಳ ನಿಲುವೆ
ಬುದ್ಧ ಬಸವಾದಿಗಳ ಬೀಡೆನಿಸಿದ ಗರಿಮೆ
ಬುದ್ಧಿವಂತರ ನಾಡೆನಿಸ ಕರುನಾಡಿನ ಸಿರಿಮುಕುಟ
ಕಾವಿಯ ಶ್ರೇಷ್ಠತೆಯು, ಶ್ರೀಗಳಿಂದ ಪಡೆಯಿತು
ಕೋವಿಯನುಪಯೋಗಿಸದೇ ಪಳಗಿಸಿದರು ವನ್ಯಜೀವಿಗಳನು
ಅವುದೋ ವೇಡಿಯಿಂದಾಕರ್ಷಿಸಿ-ಭಕ್ತಸಂಕುಲ
ಈವ ಬೇಡಿದನೆಂಬ ಸತ್ಕೀರ್ತಿ ಪಡೆದಯುಕ್ತರೆಂಬ
ಸಾಗಿ ಬಂದು ದರುಶನ ಪಡೆದರು, ಶ್ರೀ ಸಿದ್ಧಲಿಂಗೇಶ್ವರ ಸನ್ನಿಧಿಯ
ಹೋಗುವರು ಕೃತಾರ್ಥರಾಗಿ ಮರಳಿನಿಶ್ಚಿಂತರೆನಿಸಿ ಮರುವರುಷದವರೆಗೆ
ಸಿದ್ದಗಂಗೆಯ ಶ್ರೀ ಶಿವಕುಮಾರರೆಂಬ ನಾಮ ।
ಶುದ್ಧ ಶೀಲ ಚಾರಿತ್ರ್ಯದ ಗುರುವರನೆಂಬ ಖ್ಯಾತನಾಮ
ಸಿದ್ದಹಸ್ತರು ವರಸಿದ್ಧರು ವಾಣಿಸಿದ್ಧರು ಕಾಯಕಶುದ್ಧರು !
ಶ್ರದ್ಧಾವಂತರಾಗಿ ಬರುವವರ ಸಂಖ್ಯೆಗೆ ಇತಿಮಿತಿಯಿಲ್ಲ.
ಶ್ರದ್ಧೆಗೆ ತಕ್ಕ ಸತ್ಫಲವೆಂಬುತೆ ಜಾಗೃತಸ್ಥಾನಾ ಎಂಬ ಹೆಸರು ಅತಿಶ-
ಯೋಕ್ತಿಯಲ್ಲ

ಶ್ರದ್ಧರಿಗೂ ಶಾಂತತ್ವ ಕಲಿಸುವ ಪರಿಪಾಠ
ಸಿದ್ಧಿಗೆ ತಕ್ಕ ತಪವನಾಚರಿಸಿದ ದಿವ್ಯ ಐತಿಹಾಸಿಕತೆ
ನಿದ್ದೆಯಲಿದ್ದವರ ಎಚ್ಚರಿಸಿದ ಅಗ್ಗಳಿಕೆ ।

ಗುದ್ದಾಡುವವರನೂ ಕರೆದು ಬೋಧಿಸಿದ ಹೆಗ್ಗಳಿಕೆ।
ಸುದ್ದಿಗೆ ಕಾರಣರಾದರು, ನಾಡಿನ ಮೂಲೆಗಳಿಂದಾಕರ್ಷಿಸಿದ ಹೆಗ್ಗಳಿಕೆ।
ಅನ್ನದಾನ-ವಸ್ತ್ರದಾನ-ವಿದ್ಯಾದಾನ ವೆಂಬೀಮೂರುತೆರದ
ಬನ್ನ ಬಡುತಲಿರ್ದ ಬಡಜಂಗಮ ವಟುಗಳ್ ವೈದಿಕಪಾಠಶಾಲೆಯಿಂದ
ಕನ್ನಡನಾಡಿನಲೇ ಇಂದು, ವೀರಶೈವದ ಪೂಜೆವೈದಿಕತೆಯ ತರಬೇತಿ।
ಚನ್ನದಲಿ ಪಳಗಿಸಿ-ನಿತ್ಯಜೀವನಕೆ ಅಣಿಗೊಳಿಸಿ ।
ಸಿರಿಕನ್ನಡದ ಸಂಪದವು ಬೀರಿತಂಪುಕಂಪನು
ಕರುನಾಡಿನ ಹೆಮ್ಮೆಯು ಸ್ಥಾನ ಶಿವಕುಮಾರರ ವಾಸದ ತಾಣ ।
ಬರುತಲೇ। ಬಾಗಿಲೊಳು ಕೈಮುಗಿವ ಸಂಸ್ಕೃತಿ ಜಾಣ
ವರಗುರು ಶ್ರೀ ಶಿವಕುಮಾರರ ಶತಾಯುಷಿಗಳಾದ ಗುಟ್ಟನು
ಸಾರುವ ಕಾಯಕ ಮರ್ಮದ ಮೆಟ್ಟನು
ಒಮ್ಮೆ ಸಂದರ್ಶಿಸಿ ಅರಿಯಬೇಕು-ಅರಿವೇ ಗುರುವೆಂದಲಿ ಅನುಭವಿಸಿ
ತಮ್ಮನೆಯ ನೋಟ—ಮೋಹಕ ಮಾಟ—ಪ್ರಸಾದ ದಿಟವೆಂಬ ನುಡಿಸತ್ಯ॥

—ಟಿ. ಎಸ್ ನಾಗಠಾಣ, ಕನ್ನೂರು, ವಿಜಾಪುರ ಜಿಲ್ಲೆ- 586119

ಕಿರಿದಾದ ಸೋಪಾನವಾಗಿರಿಸಲು ಮಾಧ್ಯಮಿಕ ಶಾಲೆಗಳಲ್ಲಿ ಬೋಧನೆಯ ವೇಳೆ ಇದನ್ನು ವಿದ್ಯಾರ್ಥಿಗಳಿಗೆ ಕಲಿಸಲಾಗುತ್ತಿದೆ. ಒರಿಗೆಯ ಶಿಕ್ಷಣಕ್ಕೆ ಪರಿಪೂರ್ಣ ರಸದೂಟವಲ್ಲ. ಊಟಕ್ಕೆ ಉಪ್ಪಿನಕಾಯಿ ಆಗಿದೆ. ಬಣ್ಣದ ಕಾಗದಗಳು ಕಲೆಗೆ ಹೆಚ್ಚು ಸೊಬಗು ನೀಡುವುದರಿಂದ ಇದರ ಬಳಕೆಗಳು ವ್ಯಾಪಕ.

ಬದುಕಿನ ಅನೇಕ ಕ್ಷೇತ್ರಗಳಲ್ಲಿ ಒರಿಗೆಮಿಯ ಕೊಡುಗೆ ಅಪಾರ, ನಾಡಿನ ಮಹಾನಗರ ಮುಂಬಯಿ, ಮದ್ರಾಸ್, ಕಲ್ಕತ್ತಗಳಲ್ಲಿ ಒರಿಗೆಮಿ ಹವ್ಯಾಸಿ ಕ್ಲಬ್‌ಗಳು ತಲೆ ಎತ್ತುತ್ತಿವೆ. ಬೆಂಗಳೂರು, ಮೈಸೂರು, ಧಾರವಾಡ, ಹಾಗೂ ಬೆಳಗಾಂ ಅವೆಯ ನಡಿಗೆಯಿಂದ ಬರುತ್ತಿದೆ, ರಾಜ್ಯ ವಿಜ್ಞಾನ ಪರಿಷತ್ತು ಒರಿಗೆಮಿಯನ್ನು ಜನಪ್ರಿಯಗೊಳಿಸಲು ಕಾರ್ಯಾಗಾರವನ್ನು ವ್ಯವಸ್ಥೆಗೊಳಿಸುತ್ತಿದೆ.

ಹೊನ್ನಾವರ-ಆರ್.ಜಿ. ಶ್ಯಾನಭಾಗ, ಶರಾವತಿ ಪ್ರೌಢಶಾಲೆ, ಹೊಸಾಡ, ಹೊನ್ನಾವರ.



## ಪ್ರಕಟಣೆ

ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರುಸಾವಿರಮಠ, ಹುಬ್ಬಳ್ಳಿಯವರು "**ಉಳವಿ ಚನ್ನಬಸವೇಶ್ವರ ವಿಶ್ವ ವೀರಶೈವ ಸಂಶೋಧನ ಕೇಂದ್ರ**" ವನ್ನು ಪ್ರಾರಂಭಿಸುತ್ತಿದ್ದಾರೆ. ಶರಣ ಧರ್ಮ, ಸಾಹಿತ್ಯಾಭಿಮಾನಿಗಳು ಶರಣ ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥ, ತಾಳೆಯೋಲೆ ಪ್ರತಿಗಳು, ಕೈಬರಹಗ್ರಂಥಗಳು ಮುಂತಾದವುಗಳನ್ನು ಉಲ್ಲೇಖಿತ ಸಂಶೋಧನ ಕೇಂದ್ರಕ್ಕೆ ಕಾಣಿಕೆಯರೂಪದಲ್ಲಾಗಲೀ, ರಿಯಾಯಿತಿ ದರದಲ್ಲಾಗಲೀ ಕಳುಹಿಸುವುದರ ಮೂಲಕ ಸಹಕರಿಸ ಬೇಕೆಂದು ಕೋರಲಾಗಿದೆ. ಹೆಚ್ಚಿನ ವಿವರಗಳಿಗೆ "ಕಾರ್ಯದರ್ಶಿ, ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರುಸಾವಿರಮಠ, ಹುಬ್ಬಳ್ಳಿ-28" ಇವರನ್ನು ಸಂಪರ್ಕಿಸುವುದು.

# ಮನಸ್ಸಿನ ಒತ್ತಡವನ್ನು ನಿವಾರಿಸಿಕೊಳ್ಳಿ

ಹೇಳಿ ಕೇಳಿ ಇದು ಒತ್ತಡದ ಯುಗ, ಮನೆಯೊಳಗೆ, ಮನೆಯ ಹೊರಗಡೆ, ಕೆಲಸ ಮಾಡುವ ಎಡೆಯಲ್ಲಿ, ಮಾರ್ಕೆಟ್ಟು, ಬಸ್-ರೈಲು ನಿಲ್ದಾಣಗಳಲ್ಲಿ, ರಸ್ತೆಯಲ್ಲಿ ಹೋಗುವಾಗ, ವಾಹನ ಚಾಲನೆ ಮಾಡುವಾಗ, ಅಂಗಡಿಯಲ್ಲಿ ಸಾಮಾನು ಕೊಳ್ಳುವಾಗ ಬಂಧು ಮಿತ್ರರನು ಕಾಣಬೇಕಾದಾಗ, ಪರೀಕ್ಷೆ ಸಂದರ್ಶನಗಳನ್ನು ಎದುರಿಸುವಾಗ, ಮಕ್ಕಳನ್ನು ಸಾಕುವಾಗ, ಅವರನ್ನು ಶಾಲಾ-ಕಾಲೇಜುಗಳಿಗೆ ಕಳುಹಿಸುವಾಗ, ಯಾವುದೇ ರೋಗ ಬಂದು, ಆಸ್ಪತ್ರೆಗೆ ಹೋದಾಗ, ಯಾವುದೇ ಕಛೇರಿಗೆ ಹೋದಾಗ, ಕಳ್ಳಕಾಕರ ಭಯದಿಂದ ಇತ್ಯಾದಿ ಸಂದರ್ಭಗಳಲ್ಲಿ ನಾವು ಮಾನಸಿಕ ಒತ್ತಡಕ್ಕೆ ಒಳಗಾಗುತ್ತೇವೆ. ನೆಮ್ಮದಿ ಕಳೆದುಕೊಂಡು ಚಡಪಡಿಸುತ್ತೇವೆ. ಜೀವನದ ಪ್ರಮುಖ ಘಟನೆಗಳು ನಮ್ಮ ಮೇಲೆ ಸಾಕಷ್ಟು ಒತ್ತಡವನ್ನು ತರುತ್ತವೆ ಮದುವೆ, ಮಗು-ವಿನ ಜನನ, ಉದ್ಯೋಗದ ಸಂಪಾದನೆ, ವರ್ಗಾವಣೆ, ಬಡ್ತಿ, ನಿವೃತ್ತಿ, ಮನೆ ಕಟ್ಟುವುದು, ಮಗಳ ಮದುವೆ ಮಾಡುವುದು, ಪ್ರೀತಿ ಪಾತ್ರರ ಅಗಲಿಕೆ, ತೀವ್ರ ಬಗೆಯ ಅಂಗವಿಕಲತೆಯನ್ನು ತರುವ ರೋಗಗಳು ಅಥವಾ ದೀರ್ಘಕಾಲ ವಾಸಿಯಾಗದೆ ನರಳಿಸುವ ಕಾಯಿಲೆಗಳು, ಸಾವು, ಮಾನವ ನಿರ್ಮಿತ ಅಥವಾ ನೈಸರ್ಗಿಕ ಅಪ-ಘಾತ-ದುರಂತಗಳು ಇತ್ಯಾದಿ, ಈ ಪ್ರತಿಯೊಂದು ಘಟನೆ ನಮ್ಮ ಜೀವನದಲ್ಲಿ ಒಂದು ದೊಡ್ಡ ಅಥವಾ ಗಣನೀಯ ತಿರುವನ್ನು ತರಬಲ್ಲದು. ಮೈ ಮನಸ್ಸುಗಳ ಮೇಲೆ ಅಹಿತ ಪರಿಣಾಮವನ್ನುಂಟು ಮಾಡಬಲ್ಲದು. ಒಂದಂತೂ ನಿಜ, ಮಾನಸಿಕ ಒತ್ತಡವನ್ನುಂಟು ಮಾಡುವ ಈ ಎಲ್ಲ ಸಣ್ಣ-ದೊಡ್ಡ ಘಟನೆಗಳು ನಮ್ಮ ಆರೋಗ್ಯದ ಮೇಲೆ ಮಹತ್ತರ ಪ್ರಭಾವವನ್ನು ಬೀರುತ್ತವೆ. ತೀವ್ರ ಅಥವಾ ದೀರ್ಘಕಾಲದ ಸಾಧಾ-ರಣ ಒತ್ತಡವು ಶಾರೀರಿಕ ಅಥವಾ ಮಾನಸಿಕ ಅಥವಾ ಮನೋದೈಹಿಕ ಕಾಯಿಲೆ-ಯನ್ನುಂಟು ಮಾಡಬಲ್ಲುದು.

ಯಾವುದೇ ವ್ಯಕ್ತಿ ಮಾನಸಿಕ ಒತ್ತಡಕ್ಕೆ ಒಳಗಾದಾಗ, ಅವನಲ್ಲಿ ಆಗುವ ಬದಲಾವಣೆಗಳಿವು :

**1 ದೈಹಿಕ ಬದಲಾವಣೆ :**

ಒಳ ಅಂಗಾಂಗಳನ್ನು ನಿಯಂತ್ರಿಸುವ 'ಸ್ವಾಯತ್ತವರ ವ್ಯವಸ್ಥೆಯ ಒಂದು ಭಾಗ ಪ್ರಚೋದನೆಗೊಳ್ಳುವುದರಿಂದ ಹೃದಯದ ಬಡಿತ ಏರುತ್ತದೆ. ಉಸಿರಾಟ ಕಷ್ಟವಾಗುತ್ತದೆ. ಮೈ ಬಿಸಿ ಏರಿ, ಹೆಚ್ಚು ಬೆವರು ಸುರಿಯುತ್ತದೆ. ಕೈ ಕಾಲುಗಳು



ನಡುಗುತ್ತವೆ. ಪದೇ ಪದೇ ಮೂತ್ರ ಮಾಡುವ ಹಾಗೆ ಆಗುತ್ತದೆ. ನಿದ್ರೆ ಸರಿಯಾಗಿ ಬರುವುದಿಲ್ಲ. ಹಸಿವು ಸರಿಯಾಗಿ ಆಗುವುದಿಲ್ಲ. ಬಾಯಿ ರುಚಿ ಇರುವುದಿಲ್ಲ. ಅಜೀರ್ಣವಾಗುತ್ತದೆ. ತಲೆನೋವು, ಬೆನ್ನುನೋವು, ಮೈ ಕೈ ನೋವು ಬರುತ್ತದೆ. 'ಏಕೋ ಮೈಗೆ ಹುಶಾರಿಲ್ಲ' ಎಂದು ವ್ಯಕ್ತಿ ಹೇಳುವಂತಾಗುತ್ತದೆ.

**2 ಭಾವನೆಗಳಲ್ಲಿ ಬದಲಾವಣೆ :**

ಮನಸ್ಸಿನ ನೆಮ್ಮದಿ, ಸಮಾಧಾನ ಇಲ್ಲವಾಗಿ ಮನಸ್ಸನ್ನು ಆತಂಕ, ಭಯ, ಬೇಸರ, ದುಃಖ, ಕೋಪ ಆವರಿಸುತ್ತವೆ. ಯಾವುದೇ ವಿಷಯ, ಕೆಲಸದಲ್ಲಿ ಮನಸ್ಸಿಟ್ಟು ಕೆಲಸಮಾಡುವ 'ಏಕಾಗ್ರತೆ' ಇಲ್ಲವಾಗುತ್ತದೆ. ಹೊಸತನ್ನು ಕಲಿಯಲಾಗುವುದಿಲ್ಲ. ಕಲಿತದ್ದು ಬೇಗ ಮರೆತು ಹೋಗುತ್ತದೆ.

**3. ಬೌದ್ಧಿಕ ಬದಲಾವಣೆ :**

ಏಕಾಗ್ರತೆ, ಕಲಿಯುವಿಕೆ, ನೆನಪು ಕಡಿಮೆಯಾಗುವುದರಿಂದ, ವ್ಯಕ್ತಿಯ ಬೌದ್ಧಿಕ ಸಾಮರ್ಥ್ಯಕ್ಕೆ ಗ್ರಹಣ ಹಿಡಿಯುತ್ತದೆ. ಅವನ ಬುದ್ಧಿ ಚತುರತೆಗಳು ಕ್ಷೀಣಿಸಿ, ತಪ್ಪು ನಿರ್ಧಾರವನ್ನು ಮಾಡತೊಡಗುತ್ತಾನೆ. ಚಿಂತೆ ವ್ಯಥೆ ಅವನನ್ನು ಆವರಿಸುತ್ತದೆ. ಕೀಳರಿಮೆಯಿಂದ ಆತ ಮತ್ತಷ್ಟು ಕುಗ್ಗುತ್ತಾನೆ. ವಿದ್ಯಾರ್ಥಿಯಾದರೆ, ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ, ಫೇಲಾಗಬಹುದು.

**4. ನಡವಳಿಕೆಯ ಬದಲಾವಣೆ**

ನಡವಳಿಕೆಯಲ್ಲಿ ನಿರ್ದಿಷ್ಟತೆ ಇಲ್ಲದೆ, ವ್ಯಕ್ತಿ ಬೇಕಾಬಿಟ್ಟಿಯಾಗಿ ನಡೆದುಕೊಳ್ಳ ಬಹುದು. ಹಿಂಜರಿಯುವುದು, ಚಡಪಡಿಸುವುದು ಅಥವಾ ಮಂಕಾಗಿ ಕೂರುವುದು, ಜನರೊಂದಿಗೆ ಬೆರೆಯಲು ಒಲ್ಲೆ ಎನ್ನುವುದು, ದಿಕ್ಕೆಟ್ಟವನಂತೆ ವರ್ತಿಸುವುದು, ಸಮಸ್ಯಾತ್ಮಕ ಸನ್ನಿವೇಶ-ಸಂದರ್ಭದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು, ಅಸಹಾಯಕನಂತೆ ನಡೆದುಕೊಳ್ಳುವುದು ಮಾಡಬಹುದು. ಸಮಾಧಾನ ಪಡೆಯಲು ಅನಾರೋಗ್ಯಕರ ವರ್ತನೆಗಳಾದ ಅತಿಯಾದ ಧೂಮಪಾನ, ಮದ್ಯಪಾನವನ್ನು ಮಾಡಬಹುದು.

ಮಾನಸಿಕ ಒತ್ತಡಕ್ಕೆ ಸಿಲುಕಿದವರೆಲ್ಲ, ಈ ಮೇಲೆ ಕಾಣಿಸಿದ ಬದಲಾವಣೆಗಳನ್ನು ತೋರದಿರಬಹುದು. ಒತ್ತಡಕ್ಕೆ ಸಿಕ್ಕಿಯೂ ಸ್ಥಿತಪ್ರಜ್ಞತೆ ಇರಬಹುದು. ಕೆಲವರು ಮಾತ್ರ ಒತ್ತಡಕ್ಕೆ ಸನ್ನಿವೇಶಗಳಲ್ಲಿ ಸೋಲುತ್ತಾರೆ; ಏಕೆ ? ಇದಕ್ಕೆ ಹಲವಾರು ಅಂಶಗಳು ಕಾರಣವಾಗಬಲ್ಲವು.

### ಅ. ಅನುವಂಶಿಕ ಮತ್ತು ಜೈವಿಕ ಅಂಶಗಳು.

ತಂದೆ ತಾಯಿಗಳಿಂದ "ಜೀನು" [ವಂಶವಾಹಿನಿ] ಗಳ ಮೂಲಕ ವ್ಯಕ್ತಿಯ ಮಿದುಳಿನ ರಚನೆ ಮನಸ್ಸಿನ ರಚನೆಗೆ ಬೇಕಾದ "ಅಡಿಪಾಯ" ಸಿಗುವುದರಿಂದ, ಕಷ್ಟನಷ್ಟಗಳನ್ನು ಎದುರಿಸುವ, ಮನಸ್ಸಿನ ಸಮತೋಲನವನ್ನು ಉಳಿಸಿಕೊಳ್ಳುವ, ಬುದ್ಧಿ ಕೌಶಲ್ಯಗಳನ್ನು ಕಲಿಯುವ ಸಾಮರ್ಥ್ಯ ಅನುವಂಶೀಯವಾಗಿ ನಿರ್ಧಾರವಾಗುತ್ತದೆ. ಜೊತೆಗೆ ದೇಹದ ಆರೋಗ್ಯ, ಅಂಗಾಂಗಗಳ ಆರೋಗ್ಯವೂ ಇದಕ್ಕೆ ನೆರವಾಗುತ್ತದೆ. ಕೆಲವರು ಅನುವಂಶೀಯವಾಗಿ, ಜೈವಿಕವಾಗಿ ಹೆಚ್ಚು ದುರ್ಬಲರು. ಅವರು ಒತ್ತಡಕ್ಕೆ ಸಿಲುಕಿದಾಗ ಬೇಗ ಸೋಲುತ್ತಾರೆ.

### ಆ. ವ್ಯಕ್ತಿತ್ವ.

ಕೆಲವು ಬಗೆಯ ವ್ಯಕ್ತಿತ್ವವುಳ್ಳವರು ಇತರರಿಗಿಂತ ಬೇಗ ಮತ್ತು ಹಲವು ಸನ್ನಿವೇಶಗಳಲ್ಲಿ ತಾವೇ "ಮಾನಸಿಕ ಒತ್ತಡವನ್ನು" ತಂದುಕೊಳ್ಳುತ್ತಾರೆ. ಇಂಥವರನ್ನು 'ಟೈಪ್ 'ಎ' ವ್ಯಕ್ತಿತ್ವದವರು ಎಂದು ಕರೆಯುತ್ತಾರೆ. ಅವರ ಲಕ್ಷಣಗಳು ಈ ರೀತಿ ಇವೆ. ಯಾವಾಗಲೂ ಎಲ್ಲರೊಂದಿಗೆ ಸ್ಪರ್ಧಿಸುವುದು, ಮಹತ್ವಾಕಾಂಕ್ಷೆ ದೊಡ್ಡ ದೊಡ್ಡ ಗುಣ ಉದ್ದೇಶಗಳನ್ನಿಟ್ಟುಕೊಳ್ಳುವುದು, ಪ್ರತಿಯೊಂದನ್ನೂ ಪರಿಪೂರ್ಣವಾಗಿ ಅತ್ಯಂತ ಅಚ್ಚುಕಟ್ಟಾಗಿ ಮಾಡಲು ಯತ್ನಿಸುವುದು, ಸದಾ ಅತೃಪ್ತಿ, ಇತರರ ಮೇಲೆ ಅನುಮಾನ, ಸದಾ ಆತುರ, ಗಡಿಯಾರದೊಂದಿಗೆ ಸ್ಪರ್ಧೆ ಇತ್ಯಾದಿ.

### ಇ. ಸಾಮಾಜಿಕ ಆಸರೆ [ಪ್ರೋತ್ಸಾಹದ ಮಟ್ಟ]

ಯಾವ ವ್ಯಕ್ತಿಗೆ ಮನೆಯವರ, ಬಂಧು ಮಿತ್ರರ, ಸಹೋದ್ಯೋಗಿಗಳ ನೆರವು ಆಸರೆ, ಪ್ರೋತ್ಸಾಹ ಕಡಿಮೆ ಇರುತ್ತದೋ, ಯಾರು ಹೆಚ್ಚು ಒಂಟಿಯಾಗಿರುತ್ತಾರೋ ಕಷ್ಟ ಬಂದಾಗ, ಜೊತೆಗೆ ಇದ್ದು ಬೆಂಬಲ ಕೊಡುವವರು ಇರುವುದಿಲ್ಲವೋ ಅಂತಹವರು ಒತ್ತಡಕ್ಕೆ ತೀವ್ರಗತಿಯಲ್ಲಿ ಪ್ರತಿಕ್ರಿಯಿಸುತ್ತಾರೆ. ತೊಂದರೆಗಳಿಗೆ ಸಿಕ್ಕಿಹಾಕಿಕೊಳ್ಳುತ್ತಾರೆ. ಹಾಗೆಯೇ ಅನಾರೋಗ್ಯಕರ ಪರಿಸರ ಕೂಡ, ಇದಕ್ಕೆ ಕುಮ್ಮಕ್ಕು ಕೊಡುತ್ತದೆ.

### ಈ. ನಿಭಾಯಿಸುವ ಕೌಶಲ

ಚಿಕ್ಕ ವಯಸ್ಸಿನಿಂದಲೇ, ವ್ಯಕ್ತಿ ಹಂತಹಂತವಾಗಿ ಕಷ್ಟನಷ್ಟ ನೋವು ನಿರಾಸೆಗಳನ್ನು ಎದುರಿಸಿ, ನಿಭಾಯಿಸುವುದನ್ನು ಕಲಿಯಬೇಕಾಗುತ್ತದೆ. ತಂದೆ ತಾಯಿಗಳು



ಕುಟುಂಬ ಮತ್ತು ಶಾಲೆಯಲ್ಲಿ ಈ ದಿಸೆಯಲ್ಲಿ ಈ ತರಬೇತಿ ಆಗಬೇಕು. ಒಬ್ಬನೇ ಮಗ, ಚಿಕ್ಕಮಗ ಎಂದೋ ಶ್ರೀಮಂತಿಕೆಯಿಂದಲೋ, ಆಮೇಲೆ ಕಷ್ಟಪಡುವುದು ಇದ್ದೇ ಇದೆ, ಈಗ ಸುಖವಾಗಿರಲಿ ಎಂಬ ಧೋರಣೆಯಿಂದಲೋ ತಂದೆ ತಾಯಿಗಳು ಮಕ್ಕಳಿಗೆ ಕಷ್ಟ-ಸಮಸ್ಯೆಗಳನ್ನು ನಿಭಾಯಿಸುವುದನ್ನು ಕಲಿಸದೇ ಹೋಗಬಹುದು. ಅಥವಾ ಅವರಿಗೇ ಆ ಕೌಶಲ ಇಲ್ಲದೇ ಇರಬಹುದು. ಅತಿಮುದ್ದು, ಅತಿಶಿಕ್ಷೆ, ಮಾರ್ಗದರ್ಶನದ ಕೊರತೆಯಿಂದ ಅನೇಕರು ಈ ಕೌಶಲವನ್ನು ಕರಗತಮಾಡಿಕೊಳ್ಳುವುದಿಲ್ಲ. ಅಂತಹವರು ಒತ್ತಡದ ಕೆಟ್ಟ ಪರಿಣಾಮಗಳಿಗೆ ಸುಲಭದ ತುತ್ತಾಗುತ್ತಾರೆ.

ಇದಲ್ಲದೆ ಒಂದು ಸಮಸ್ಯೆ ಕಷ್ಟಕರ ಸನ್ನಿವೇಶ ಅನಿರೀಕ್ಷಿತವಾಗಿ ಬಂದರೆ, ಅನಪೇಕ್ಷಣೀಯವಾಗಿ ಒದಗಿದರೆ, ಅದರ ಹತೋಟಿ ಸಾಧ್ಯವಿಲ್ಲ ಎಂದು ವ್ಯಕ್ತಿಗೆ ಅನಿಸಿದರೆ, ಅದು ಅವನ ಇರುವಿಕೆ ಅಥವಾ ಮಾನ-ಮರ್ಯಾದೆಗೆ ಅಪಾಯವನ್ನುಂಟುಮಾಡುತ್ತದೆ ಎಂದಾದರೆ; ಬೇರೆ ಯಾರಿಗೂ ಇಲ್ಲ ತನಗೊಬ್ಬನಿಗೇ ಈ ಕಷ್ಟ ಬಂದಿದೆ ಎಂದು ಅನಿಸಿದರೆ, ಸಮಸ್ಯೆ ಹೊಸತಾಗಿ ಮೊದಲ ಸಲ ಬಂದಿದೆ ಎಂದು ವ್ಯಕ್ತಿ ತಿಳಿದರೆ, ಅದರ ಪರಿಣಾಮ ತೀವ್ರವಾಗೇ ಇರುತ್ತದೆ.

ಹೀಗಾಗಿ ಸಾಕಷ್ಟು ಜನ ತಮ್ಮದೇ ಆದ ಕಾರಣಗಳಿಂದ ಅಥವಾ ಪರಿಸರದ ಕಾರಣಗಳಿಂದ ಇತರರಿಗಿಂತ ಹೆಚ್ಚಾಗಿ ಅಥವಾ ಪದೇ ಪದೇ ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾರೆ. ಆಗ ಆಗುವ ಕೆಟ್ಟ ಪರಿಣಾಮಗಳಾವುವು ?

### 1. ಮಾನಸಿಕ ಅಸ್ವಸ್ಥತೆ :

ವಿಪರೀತ ಭಯ, ದುಃಖ, ನಿದ್ರೆ ಬರದಿರುವುದು, ಹಸಿವು ಕಡಿಮೆಯಾಗುವುದು, ದಣಿವು, ನಿಶ್ಯಕ್ತಿ, ತಲೆನೋವು, ಮೈ ಕೈ ನೋವು, ಲೈಂಗಿಕ ದುರ್ಬಲತೆ, ಮೈ ಕೈ ನಡುಕ, ವಿಪರೀತ ಬೆವರು ಇತ್ಯಾದಿ ರೋಗಲಕ್ಷಣಗಳನ್ನು ಪ್ರಕಟಿಸುವ ಆತಂಕ, ಖಿನ್ನತೆ, ಉನ್ಮಾದ ಮನೋಬೇನೆಗಳು ಬರುತ್ತವೆ.

### 2. ವಸ್ತು-ಅವಲಂಬನೆ ಚಟ :

ಹೊಗೆ ಸೊಪ್ಪು, ಸಿಗರೇಟ್ ಸೇವನೆ, ಬೀರ್, ಬ್ರಾಂದಿ, ಕುಡಿತ, ಮಾದಕ ವಸ್ತುಗಳ (ಗಾಂಜಾ ಅಫೀಮು) ಸೇವನೆಯ ಚಟ ಕಂಡುಬರಬಹುದು.

### 3. ಅಪಘಾತ :

ರಸ್ತೆ ಅಪಘಾತಗಳು, ಅಡುಗೆಮನೆ ಮತ್ತು ಕೆಲಸ ಮಾಡುವ ಸ್ಥಳಗಳಲ್ಲಿ ಅಪಘಾತಗಳು ಹೆಚ್ಚುತ್ತವೆ.

4. ಶಾರೀರಿಕ ಕಾಯಿಲೆಗಳು :

ದೀರ್ಘಕಾಲದ ಮಾನಸಿಕ ಒತ್ತಡದಿಂದ ಅಧಿಕ ಆಮ್ಲಸ್ಥಿತಿ (ಅಸಿಡಿಟಿ ಅಥವಾ ಗ್ಯಾಸ್ಟ್ರಿಕಾಪ್ರಾಬ್ಲಮ್) ಜಠರದ ಹುಣ್ಣು, ಅಧಿಕರಕ್ತದೊತ್ತಡ, ರಕ್ತ ಭೇಧಿ, ಅಸ್ತಮಾ, ಮೈಗ್ರೆನ್ ತಲೆನೋವು, ಋತು ಚಕ್ರದ ಏರು ಪೇರುಗಳು, ಕೀಲುಗಳ ಬಾಧೆ, ಅಲರ್ಜಿ, ಸೋರಿಯಾಸಿಸ್‌ನಂತಹ ಚರ್ಮರೋಗಗಳು, ಕ್ಯಾನ್ಸರ್ ಇತ್ಯಾದಿ ಅನೇಕ ಬಗೆಯ ಶಾರೀರಿಕ ರೋಗಗಳು ಕಾಲಿಡುತ್ತವೆ. ಜೊತೆಗೆ ಒತ್ತಡದಲ್ಲಿರುವಾಗ ವ್ಯಕ್ತಿಯ, 'ರೋಗ ನಿರೋಧಕ ಶಕ್ತಿ' ಕುಗ್ಗುತ್ತದೆ. ರೋಗಾಣುಗಳ ವಿರುದ್ಧ ಹೋರಾಡುವ ಬಿಳಿರಕ್ತಕಣಗಳು, ಲಿಂಫ್ ಕಣಗಳ ಸಂಖ್ಯೆ ಕುಗ್ಗುತ್ತದೆ. ತತ್ಪರಿಣಾಮವಾಗಿ ದೇಹದ ದ್ವಾರಗಳಲ್ಲಿ ಕಂಡು ಬರುವ ರೋಗಾಣುಗಳು, ದೇಹದೊಳಕ್ಕೆ ನುಗ್ಗಿ ಬಂದು ಅನೇಕ ಸೋಂಕು ರೋಗಗಳನ್ನುಂಟು ಮಾಡುತ್ತವೆ. ಕ್ಷಯ, ಶ್ವಾಸನಾಳ ಮತ್ತು ಕೋಶದ ಸೋಂಕು, ಗಂಟಲ ಬೇನೆ, ಚರ್ಮದ ಬೂಷ್ಟು ಸೋಂಕು, ಹರ್ಪಿಸ್ ವೈರಸ್ಸಿನ ಸೋಂಕು [ಸರ್ಪಸುತ್ತು] ಇದಕ್ಕೆ ಒಳ್ಳೆಯ ಉದಾಹರಣೆಗಳು.

ಹೀಗೆ ಮಾನಸಿಕ ಒತ್ತಡ ವ್ಯಕ್ತಿಯ ಮಾನಸಿಕ ಮತ್ತು ದೈಹಿಕ ಆರೋಗ್ಯವನ್ನು ಹಾಳು ಮಾಡಬಲ್ಲುದು.

ಪರಿಹಾರ :

ಪರಿಹಾರಕ್ಕೆ ವ್ಯಕ್ತಿ, ಕುಟುಂಬ ಮತ್ತು ಸಮಾಜ ಒಟ್ಟಿಗೆ ಸೇರಿ ಕೆಲಸ ಮಾಡಿದರೆ ಫಲಿಂತಾಂಶ ಉತ್ತಮವಾಗಿರುತ್ತದೆ.

1. ಆತ್ಮ ವಿಶ್ವಾಸದ ವೃದ್ಧಿ :

ವ್ಯಕ್ತಿ ತಾನು ಇದುವರೆಗೆ ಏನು ಸಾಧಿಸಿದ್ದಾನೋ, ಅದರ ಬಗ್ಗೆ ಮತ್ತು ಪ್ರಕೃತಿ ಹಾಗೂ ಪರಿಸರ ಕೊಟ್ಟ ತನ್ನ ದೇಹ–ವ್ಯಕ್ತಿತ್ವ–ಸ್ಥಾನಮಾನಗಳ ಬಗ್ಗೆ ಹೆಮ್ಮೆ ಪಡುವುದನ್ನು ಅಭ್ಯಾಸಮಾಡಿಕೊಳ್ಳಬೇಕು. ತನ್ನ ಕೊರತೆಗಳ ಬಗ್ಗೆ, ತನ್ನ ಹಿನ್ನಲೆ ಬಗ್ಗೆ, ತನ್ನ ತಪ್ಪುಗಳ ಬಗ್ಗೆ ಚಿಂತಿಸುವುದನ್ನು ಬಿಡಬೇಕು. ತನ್ನ ಶಕ್ತಿ-ಕೌಶಲ–ಜ್ಞಾನವನ್ನು ಹೆಚ್ಚಿಸಿಕೊಳ್ಳುವುದರತ್ತ ಪ್ರಾಮಾಣಿಕ ಪ್ರಯತ್ನ ಮಾಡುವುದರಿಂದ ಆತ್ಮವಿಶ್ವಾಸ ಹೆಚ್ಚುತ್ತದೆ. ಇತರರಿಗೆ ಸ್ನೇಹ ತೋರಿಸಿ, ಕೈಲಾದ ಸಹಾಯ ಮಾಡುವುದರಿಂದ ಆತ್ಮವಿಶ್ವಾಸ ವೃದ್ಧಿಯಾಗುತ್ತದೆ. ಹೊಸತನ್ನು ಸೃಷ್ಟಿಸುವ, ಸಣ್ಣದಾದರೂ ಗುರಿ ಉದ್ದೇಶವನ್ನಿಟ್ಟುಕೊಂಡು ಅದನ್ನು ಸಾಧಿಸುವುದರಿಂದ ಆತ್ಮವಿಶ್ವಾಸ ದ್ವಿಗುಣಗೊಳ್ಳುತ್ತದೆ. ಹಿಂದಿನ ತಪ್ಪುಗಳಿಂದ ಪಾಠಕಲಿತು, ಮುಂದೆ ಸಾಗಬೇಕು. ಮಾಡಿದ ತಪ್ಪನ್ನೇ ಮಾಡಬಾರದು. ತಪ್ಪಿತಸ್ಥ ಭಾವನೆ ಮಾತ್ರಬೇಡ.



೨ ಆರೋಗ್ಯಕರ ಜೀವನ ಶೈಲಿ :

ಹಿತಮಿತವಾದ ಆಹಾರ, ವೇಳೆವೇಳೆಗೆ ಆಹಾರ ಸೇವನೆ, ಸ್ನಾನ, ಸ್ವಚ್ಛತೆ, ಉಡುಪು ಅಲಂಕಾರ, ನಿದ್ರೆ ಇತ್ಯಾದಿ ದೈನಂದಿನ ಚಟುವಟಿಕೆಗಳಲ್ಲಿ ಶಿಸ್ತು, ಸಂಯಮ ಕೆಲಸಗಳನ್ನು ಮೊದಲೇ ಯೋಜಿಸಿ ಮಾಡುವುದು, ತನಗಿರುವ ಸಂಪತ್ತು ಸವಲತ್ತುಗಳ ಇತಿಮಿತಿಯಲ್ಲೆ, ಆಸೆ–ಆಕಾಂಕ್ಷೆಗಳನ್ನಿಟ್ಟುಕೊಳ್ಳುವುದು, ಹಾಸಿಗೆ ಇದ್ದಷ್ಟು ಕಾಲು ಚಾಚಿ ಸರಳ ಜೀವನದಲ್ಲಿ ಸುಖ ಕಾಣುವುದು, ಸಾಧ್ಯವಾದಷ್ಟು ಇತರರಿಂದ ಕಡಿಮೆ ನಿರೀಕ್ಷೆ ಮಾಡುವುದು, ಇತರರಲ್ಲಿರುವ ಒಳ್ಳೆಯ ಗುಣಗಳನ್ನು ಗುರುತಿಸಿ ಪ್ರಶಂಸಿಸುವುದು, ಟೀಕೆ ಮಾಡಬಯಸುವ ನಾಲಿಗೆಗೆ ಕಡಿವಾಣ ಹಾಕುವುದು. ತನ್ನ ಬೇಕು ಬೇಡಗಳ ಪಟ್ಟಿಯನ್ನು ಆದಷ್ಟು ಚಿಕ್ಕದು ಮಾಡುವುದು, ಆರೋಗ್ಯಕರ ಮನರಂಜನೆಗಾಗಿ ದಿನದ ಒಂದು ಗಂಟೆಯನ್ನು ಮೀಸಲಾಗಿಟ್ಟು ಸಂಗೀತ, ಸಾಹಿತ್ಯ, ಕಲೆ, ಆತ್ಮೀಯರೊಡನೆ ಸರಸ ಸಂಭಾಷಣೆ, ವ್ಯಾಯಾಮ, ಕ್ರೀಡೆ, ತೋಟಗಾರಿಕೆಯಂತಹ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು. ಮಾನವಾತೀತ ಶಕ್ತಿ (ದೇವರು)ಯಲ್ಲಿ ವಿಶ್ವಾಸವಿಟ್ಟು, ನೈತಿಕ ಮೌಲ್ಯಗಳಿಗೆ ಬೆಲೆ ಕೊಟ್ಟು ನಡೆದುಕೊಳ್ಳುವುದು, ಆಧ್ಯಾತ್ಮಿಕ ಚಿಂತನೆ ಮಾಡುವುದು, ಕುಟುಂಬ ಜೀವನಕ್ಕೆ ಹೆಚ್ಚು ಒತ್ತುಕೊಟ್ಟು, ಕುಟುಂಬ ಸದಸ್ಯರುಗಳೊಂದಿಗೆ ಪ್ರೀತಿ–ವಿಶ್ವಾಸಗಳಿಂದ ನಡೆದುಕೊಳ್ಳುವುದು, ಬಿಡುವಿನ ವೇಳೆಯನ್ನು ಸೃಜನ ಶೀಲ ಚಟುವಟಿಕೆಗಾಗಿ, ಜ್ಞಾನ ವೃದ್ಧಿಗಾಗಿ ಬಳಸುವುದು- ಇತ್ಯಾದಿ ಅಂಶಗಳುಳ್ಳ ಆರೋಗ್ಯ ಜೀವನ ಶೈಲಿಯನ್ನು ಸಾಧಿಸಬೇಕು.

೩) ಸಮಸ್ಯೆಯನ್ನು ನಿಭಾಯಿಸುವ ಕೌಶಲವನ್ನು ಉತ್ತಮಪಡಿಸಿಕೊಳ್ಳುವುದು ಧೈರ್ಯವಾಗಿ ಎದುರಿಸಿ ಹೋರಾಡುವುದು (Confrontation, Fight) ಯೋಜಿತವಾಗಿ ಹಿನ್ನಡೆಯುವುದು (Withdrawal Avoidance) ಅಥವಾ ರಾಜಿಮಾಡಿಕೊಳ್ಳುವುದು (Compromise) ಯಾವುದೇ ಸಮಸ್ಯೆ ಕಷ್ಟವನ್ನು ಎದುರಿಸಲು ಇರುವ ವಿಧಾನಗಳು, ಸನ್ನಿವೇಶ-ಸಮಸ್ಯೆಗೆ ತಕ್ಕಂತೆ ಇವುಗಳಲ್ಲಿ ಒಂದನ್ನು ಬಳಸಬಹುದು, ಇತರರ ನೆರವಿನಿಂದ, ಅನುಭವಸ್ಥರ/ಹಿರಿಯರ ಮಾರ್ಗದರ್ಶನದಲ್ಲಿ ಈ ನಿಭಾಯಿಸುವ ಕೌಶಲವನ್ನು ಹೆಚ್ಚಿಸಿಕೊಳ್ಳಬೇಕು. ಸೋಲಿನಿಂದ ಧೃತಿಗೆಡದೆ, ಗೆಲುವಿನತ್ತ ಮುನ್ನಡೆಯಬೇಕು. ಸೋಲು–ಗೆಲುವನ್ನು ಪ್ರತಿಷ್ಠೆಯ ವಿಷಯ ಮಾಡದೇ, ಸಮಸ್ಯೆಯ ವಿಶ್ಲೇಷಣೆ–ಪರಿಹಾರಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸುವ ಕಲೆಯನ್ನು ಸಾಧಿಸಬೇಕು. ಈ ಪ್ರಾಮಾಣಿಕ ಪ್ರಯತ್ನದಲ್ಲೇ ಆನಂದವಿದೆ, ಜೀವನದ ಸಾರ್ಥಕತೆ ಇದೆ ಎಂಬುದನ್ನು ತಿಳಿಯಬೇಕು.

ಸೌಜನ್ಯ : ಬಿತ್ತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ-503 200)

—ಡಾ॥ ಸಿ. ಆರ್. ಚಂದ್ರಶೇಖರ್, ಮನೋವೈದ್ಯರು, ರಾಷ್ಟ್ರೀಯ ಮಾನಸಿಕ
ಆರೋಗ್ಯ ಮತ್ತು ನರ ವಿಜ್ಞಾನ ಸಂಸ್ಥೆ (ನಿಮ್ಹಾನ್ಸ್), ಬೆಂಗಳೂರು-560029

## ಮಾಣಿಕ್ಯ ದೀಪ್ತಿ -

ಇಂದು ಮನುಷ್ಯ-ಮನುಷ್ಯರ ಮಧ್ಯೆ ದ್ವೇಷ ಅಸೂಯೆ ಕೊಲೆ ಸುಲಿಗೆಗಳು ತಾಂಡವವಾಡುತ್ತಿವೆ. ಜಾತಿ-ಮತ-ವರ್ಗ-ವರ್ಣಗಳ ಹೆಸರಿನಲ್ಲಿ ಹಿಂಸಾಪ್ರವೃತ್ತಿಗಳು ನಡೆಯುತ್ತಿವೆ. ಮಂದಿರ-ಮಸೀದಿ, ಮಹಾತ್ಮರ ಹೆಸರಿನಲ್ಲಿ ಸ್ವಾರ್ಥ ಸಾಧನೆ-ಯೊಂದಿಗೂಡಿ, ಧರ್ಮತಳ ಕಚ್ಚಿದೆ.

ಇದೆಲ್ಲವನ್ನು ಆಲೋಚಿಸಿದಾಗ ಇಹಲೋಕದಲ್ಲಿ ಶ್ರೇಷ್ಠ ಪ್ರಾಣಿ ಎನಿಸಿದ ಮಾನವರಾದ ನಾವು ಕಲಿತ್ತಿದ್ದೇನು? ಕಲಿಯಬೇಕಾದುದು ಏನು? ಎಂದು ಚಿಂತನೆ ಮಾಡಿದಾಗ ಒಂದು ಸಣ್ಣ ಕಥೆ ಜ್ಞಾಪಕಕ್ಕೆ ಬರುತ್ತದೆ.

ಒಮ್ಮೆ ದೇವತೆಗಳು, ಮನುಷ್ಯರು, ರಾಕ್ಷಸರು, ಈ ಮೂವರೂ ತಮ್ಮ ತಂದೆಯಾದ ಪ್ರಜಾಪತಿಯ ಹತ್ತಿರ ಬ್ರಹ್ಮಚರ್ಯ ವ್ರತದಿಂದಶುಶ್ರೂಷೆ ಮಾಡಿಕೊಂಡಿದ್ದರು. ಅವಧಿ ಮುಗಿದನಂತರ ಮೊದಲು ದೇವತೆಗಳು ಬಂದು, ಪ್ರಜಾಪತಿಯನ್ನು ಕುರಿತು, ನಮಗೆ ' ದಯವಿಟ್ಟು ಉಪದೇಶ ಮಾಡಬೇಕು; ಎಂದು ಕೇಳಿದರು. ಪ್ರಜಾಪತಿಯು ಅವರಿಗೆ ' ದ ' ಎಂಬ ಒಂದು ಅಕ್ಷರವನ್ನು ಹೇಳಿ ' ತಿಳಿಯಿತೆ ' ಎಂದು ಕೇಳಿದನು. ಅವರು ತಿಳಿಯಿತು ' ದಮನ ಮಾಡಿಕೊಳ್ಳಿ ' ಎಂದು ಅಪ್ಪಣೆ ಕೊಟ್ಟಿರಿ ಎಂದರು. ಅನಂತರ ಮನುಷ್ಯರು ಬಂದರು. ಅವರಿಗೂ 'ದ' ಎಂದೇ ಉಪದೇಶ ಮಾಡಿದ ಪ್ರಜಾಪತಿಯು 'ತಿಳಿಯಿತೇ' ಎಂದು ಕೇಳಿದನು. ಅವರು ತಿಳಿಯಿತು 'ದಾನ' ಮಾಡಿರಿ ಎಂದು ಹೇಳಿದಿರಿ ಎಂದರು. ಹೀಗೆಯೇ ರಾಕ್ಷಸರು ಬಂದರು. ಅವರಿಗೂ 'ದ' ಎಂದೆ ಉಪದೇಶ ಮಾಡಿದ ಪ್ರಜಾಪತಿಯು "ತಿಳಿಯಿತೇ" ಎಂದು ಕೇಳಿದನು ಅವರು ತಿಳಿಯಿತು. "ದಯೆ" ತೋರಿಸಿರಿ ಎಂದಿರಿ ಎಂದು ಹೇಳಿದರು. ಆಗ ಪ್ರಜಾಪತಿಯು ಎಲ್ಲರೂ ಸರಿಯಾಗಿಯೇ ತಿಳಿದು ಕೊಂಡಿದ್ದೀರಿ ಎಂದನು. ಇದರ ಸಿದ್ಧಾಂತವೇನೆಂದರೆ "ತದೇ ತತ್ರಯಂ ಶಿಕ್ಷೇತ್ ದಮಂ ದಾನಂ ದಯಾಮಿತಿ".

ಮಹಾತ್ಮರ ಸನ್ನಿಧಿಯಲ್ಲಿ ನಡೆಸಿದ ತಪಶ್ಚರ್ಯೆಯ ಫಲವಾಗಿ ಒಂದಕ್ಷರವನ್ನು ಕೇಳಿದರೂ ಅದೇ ಸಾಕಷ್ಟು ಉಪದೇಶವಾಯಿತು. ತಮ್ಮ ತಮ್ಮ ಲೋಪದೋಷಗಳು ಅವುಗಳನ್ನು ತಿದ್ದಿಕೊಳ್ಳಲು ತಾವು ಕೈಕೊಳ್ಳಬೇಕಾದ ಕಾರ್ಯವೂ ಅವರಿಗೇ ಹೊಳೆಯಿತು. ದೇವತೆಗಳು ಕಲ್ಪವೃಕ್ಷ ಕಾಮಧೇನು, ಚಿಂತಾಮಣಿಗಳುಳ್ಳವರು ಅವರಿಗೆ ಮೀರಿದ್ದು ಯಾವುದೂ ಇಲ್ಲ. ಹೀಗೆಂದು ಅವರು ಸ್ವಾಚ್ಛಂದ್ಯದಿಂದ ಕಟ್ಟುಹರಿದ ಪಂಚಾಗ ಬಾಳದು. ಮನುಷ್ಯರು ಪುಣ್ಯವಂತರಲ್ಲ; ಅವರಿಗೆ ಎಷ್ಟು ಬಂದರೂ

ಸಾಲದು. ಹೀಗೆಂದು ಅವರು ಕಾರ್ಪಣ್ಯದಲ್ಲಿ ತೊಳಲಬಾರದು; ಪರಸ್ಪರ ಸಹಕಾರದಿಂದ ಕೊಟ್ಟು, ಬಿಟ್ಟು, ವರ್ತಿಸಬೇಕು. ರಾಕ್ಷಸರು ಕಂಡ ಕಂಡವರ ಮೇಲೆ ಬಿದ್ದು ಅವರನ್ನು ಬಾಯಿಗೆ ಹಾಕಿಕೊಳ್ಳದಿದ್ದರೆ ಸಾಕಾಗಿದೆ. ದಯೆ ತೋರಿ ಬಿಟ್ಟು ಬಿಟ್ಟರೆ ಅದೇ ಒಂದು ಪುಣ್ಯವೆನಿಸುವುದು.

ಈ ಭೂಲೋಕದಲ್ಲಿರುವ ನಾವೆಲ್ಲರೂ ದೇವತೆಗಳೂ ಹೌದು, ಮನುಷ್ಯರೂ ಹೌದು, ರಾಕ್ಷಸರೂ ಹೌದು; ನಮ್ಮಲ್ಲಿ ಈಗ ಹೇಳಿದ ಮೂರೂ ಅಂಶಗಳೂ ಸೇರಿರುತ್ತವೆ. ಸಿಟ್ಟು ಬಂದಾಗ ನಾವೆಲ್ಲ ರಾಕ್ಷಸರೇ, ಅಯ್ಯೋ ಪಾಪ ಎನಿಸಿದಾಗ ಮನುಷ್ಯರು. ಮದದಿಂದ ಸೊಕ್ಕಿದಾಗ ದೇವತೆಗಳು.

ಆದ್ದರಿಂದ "ತದೇ ತತ್ತ್ರಯಂ ಶಿಕ್ಷೇತ್-ದಮಂ ದಾನಂದಯಾ ಮಿತಿ; ಅಂದರೆ ದಮ-ದಾನ-ದಯೆ ಈ ಮೂರನ್ನು ಕಲಿಯಬೇಕು. ಇದನ್ನು ಕಲಿಯಲು ಪ್ರಜಾಪತಿಯ ಸ್ಥಾನದಲ್ಲಿ ನಮಗೆ ಶರಣರು ಮಹಾತ್ಮರು, ಪವಾಡಪುರುಷರು, ಧರ್ಮ ಋಷಿಪುಂಗವರು ತಪಸ್ವಿಗಳು ಮಿಗಿಲಾಗಿ ಅನೇಕ ಪುಣ್ಯಪುರುಷರು ಬಿಟ್ಟುಕೊಟ್ಟು ಹೋಗಿರುವ ವಚನಾಮೃತ ಸಾಧನೆಯ ಸಂಪತ್ತಿದೆ. ಪ್ರತಿಯೊಂದು ಜಾತಿ-ಮತ ಧರ್ಮಗಳಿಗೂ ಆದರ್ಶ ಪುರುಷ ಸಿಂಹರೂ ಧರ್ಮರಕ್ಷಕರೂ ದಾರಿದೀಪವಾಗಿ ಬೆಳಗುತ್ತಿದ್ದಾರೆ. ಇವರೆಲ್ಲರ ಸಿದ್ಧಾಂತವೂ ಕೂಡ "ದಮಂ ದಾನಂ ದಯಾಮಿತಿ" ಎಂದು ಒಟ್ಟುಗೂಡಿಸಿ ನಮ್ಮೆಲ್ಲರಿಗೂ ಹೇಳುವ ಮಹಾಮಂತ್ರವಾಗಬೇಕು. ಒಬ್ಬೊಬ್ಬರೂ ಇದನ್ನು ಮನನ ಮಾಡಿ ಆಚರಣೆಗೆ ತರುವುದಾದರೆ, ಕುಟುಂಬದಲ್ಲಾಗಲಿ ದೇಶದಲ್ಲಾಗಲಿ, ಜಗತ್ತಿನಲ್ಲಾಗಲಿ, ಶಾಂತಿ, ಸಮಾಧಾನಗಳು ನೆಲೆಸಿಯಾವು.

ಹಾಗಲ್ಲದೆ. ತಮ್ಮ ಕೈಯಲ್ಲಿ ನಿಗ್ರಹಾನುಗ್ರಹ ಸಾಮರ್ಥ್ಯವಿದೆ ಎಂದು ದೇವತೆಗಳು ಅರ್ಥಾತ್ ಮೇಲೆನಿಸಿದವರು ಉಚ್ಛೃಂಖಲವಾಗಿ ನಡೆದರೆ ಎಷ್ಟು ಬಂದರೂ ಸಾಲದು ಎಂದು ಶ್ರೀ ಸಾಮಾನ್ಯ ಮನುಷ್ಯರು ದೀನನಾಥರಲ್ಲಿ ಕಾರ್ಪಣ್ಯವನ್ನೂ ತೋರಿಸಿದರೆ, ತಮ್ಮ ತೋಳಿನಲ್ಲಿ ಬಲವಿದೆ, ಕೈಯಲ್ಲಿ ಆಯುಧವಿದೆ, ಇರಿ, ತಿವಿ, ಕೊಲ್ಲು, ಸುಡು ಎಂದು ರಾಕ್ಷಸರು ಅಂದರೆ ಬಲಿಷ್ಟರು ದಾಳಿ ಮಾಡಿದರೆ ದೇಶದಲ್ಲಿ ಶಾಂತಿ ಸೌಮನಸ್ಯಗಳು ಹೇಗೆ ಬರಲು ಸಾಧ್ಯವಾದೀತು.

ವಿದ್ವಾನ್. ಎಸ್. ಷಡಕ್ಷರಿ, ಉಪಪ್ರಾಧ್ಯಾಪಕರು, ಸಿದ್ಧಗಂಗಾ ಸಂಸ್ಕೃತಕಾಲೇಜು ಸಿದ್ಧಗಂಗಾಮಠ

---

## ವಚನ

ಗುರುವಚನದಿಂದಲ್ಲದೆ ಲಿಂಗವನರಿಯಬಾರದು. ಗುರುವಚನದಿಂದಲ್ಲದೆ ಜಂಗಮವನರಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವನರಿಯಬಾರದು. ಗುರುವಚನದಿಂದಲ್ಲದೆ ತನ್ನ ತಾನರಿಯಬಾರದು. ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಂದು ಜ್ಞಾನೋದಯ ವಾದರೆ, ಗುರುವಿಲ್ಲದ ಮುನ್ನ ಆಯಿತ್ತೆನ್ನಬಹುದೇ? ತನ್ನಲ್ಲಿ ತಾನು ಸನ್ನಿಹಿತವಾದ- ಹೆನೆಂದರೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆರೂಢಿಯ ಕೂಟ ಸಮನಿಸದು ಕೇಳಾ.

—ಮುಕ್ತಾಯಕ್ಕ



## ವಿವೇಚನೆ

ದಿನನಿತ್ಯ ಜೀವನದಲ್ಲಿ ವಿಧ ವಿಧವಾದ ಸಮಸ್ಯೆಗಳು ಎದುರು ಬರುತ್ತಿರುತ್ತವೆ. ಆ ಸಮಸ್ಯೆಗಳನ್ನು ಪರಿಹರಿಸಿಕೊಂಡು ಬಾಳ್ವೆ ನಡೆಸಬೇಕಾದರೆ ಆಲೋಚನೆ ಅತಿ ಮುಖ್ಯ. ಜೀವನದಲ್ಲಿ ಹುಟ್ಟಿಕೊಳ್ಳುವ ಎಂಥ ಎಡರು ತೊಡರುಗಳನ್ನು ನೀಗಿ ಯಶಸ್ವಿಯಾಗಿ ಬಾಳಲು ಆಲೋಚನೆ ಮಾನವನಿಗೆ ನಿರಂತರವೂ ನೆರವಾಗುವ ವರಪ್ರಸಾದದಂತಿದೆ.

ಇಂದಿಯಾನುಭವ ಮೂಲಕ ನಮಗೆ ದೊರಕುವ ಪ್ರತ್ಯಕ್ಷಾನುಭವಗಳು ಭಾವನೆಗಳಾಗಿ ಮನಸ್ಸಿನಲ್ಲಿ ಸೇರುತ್ತವೆ. ಅವು ಅಲ್ಲಿ ಸುಮ್ಮನೆ ಉಳಿಯುವುದಿಲ್ಲ. ಒಂದಕ್ಕೊಂದಕ್ಕೆ ಸಂಬಂಧಕಲ್ಪಿಸಿಕೊಂಡು ನೂತನ ಜ್ಞಾನದ ನಿರ್ಮಾಣ ಕಾರ್ಯದಲ್ಲಿ ತೊಡಗುತ್ತದೆ, ನೂತನ ಜ್ಞಾನವನ್ನು ಪಡೆಯಲು ನಡೆಯುವ ಈ ಉನ್ನತ ಮಟ್ಟದ ಮನೋವ್ಯಾಪಾರವೇ ಆಲೋಚನೆ, ಅದಕ್ಕೆ ಸ್ಮರಣೆ ಮತ್ತು ಕಲ್ಪನೆ ಸಹಾಯ ಮಾಡುವ ಮನೋವ್ಯಾಪಾರಗಳು.

ಕೆಲವರು ಸಾಧಾರಣ ಸಮಸ್ಯೆಯನ್ನು ಬಿಡಿಸಲು ಆಲೋಚಿಸಲಾರದಷ್ಟು ದುರ್ಬಲರು, ಇನ್ನು ಕೆಲವರು ಸಾಧಾರಣ ಸಮಸ್ಯೆಗಳನ್ನು ಮಾತ್ರ ಬಿಡಿಸಬಲ್ಲರು. ಮತ್ತೆ ಕೆಲವರು ಬಹುಸಂಕೀರ್ಣ ಸಮಸ್ಯೆಗಳನ್ನು ಬಿಡಿಸಬಲ್ಲರು. ಈ ವ್ಯತ್ಯಾಸಗಳಿಗೆ ಅವರವರು ಪಡೆದುಕೊಂಡಿರುವ ಭಿನ್ನ ಮಟ್ಟದ ಆಲೋಚನಾಶಕ್ತಿಯೇ ಕಾರಣ, ಆಲೋಚಿಸುವ ಕಾರ್ಯದಲ್ಲಿ ತಕ್ಕಷ್ಟು ಅನುಭವ ಮತ್ತು ಅಭ್ಯಾಸ ಇಲ್ಲದಿದ್ದರೆ ಉನ್ನತ ಮಟ್ಟದ ಆಲೋಚನಾಶಕ್ತಿಯಿದ್ದರೂ ಫಲಪ್ರಧವಾಗಿ ಕೆಲಸ ಮಾಡಲಾರದು.

ಆಲೋಚನೆಯ ಕಾರ್ಯ ಮುಖ್ಯವಾಗಿ ಮಾನಸಿಕ ವ್ಯಾಪಾರವಾದ್ದರಿಂದ ಅದನ್ನು ನಾವು ನೋಡಿ ತಿಳಿಯುವಂತಿಲ್ಲ. ಆದರೆ ನಾವು ಆಲೋಚಿಸುವಾಗ ಆಗುವ ಅನುಭವವನ್ನು ನಾವೇ ಅರಿತುಕೊಳ್ಳಬಹುದು ನರಮಂಡಲಕ್ಕೆ ಸಂಬಂಧಿಸಿದ್ದರೂ ಆಲೋಚನೆ ಅನೇಕ ವೇಳೆ ನಿರ್ದಿಷ್ಟ ರೀತಿಯ ದೈಹಿಕ ವರ್ತನೆಗಳನ್ನು ಮಾಡಿಸುವುದು, ಆಗ ದೇಹದ ಹಲವು ಮಾಂಸಖಂಡಗಗಳು ಬಿಗಿಯಾಗುವುವು. ಅವಧಾನ ಮೊನೆಗೊಳ್ಳುವುದರಿಂದ ಕಣ್ಣಿನ ನೋಟ ಯಾವುದೋ ಅಂಶದ ಮೇಲೆ ಕೇಂದ್ರಿಕರಿಸಿರುವಂತೆ ಕಾಣುವುದು.

ಆಲೋಚನೆಯ ಫಲವಾಗಿ ಮೂಡುವ ರಸಭಾವವು ದೈಹಿಕ ಪರಿವರ್ತನೆಗಳಲ್ಲಿ ಕಾಣಿಸಿಕೊಳ್ಳಬಹುದು. ತೃಪ್ತಿಯಾಗುವಂತೆ ಆಲೋಚನೆ ನಡೆದರೆ ಮುಖದಲ್ಲಿ ಸಂತೋಷ ಕಂಡುಬರುತ್ತದೆ. ಫಲಹಿತಕರವಲ್ಲದಿದ್ದರೆ ಜೋಲುಮುಖ ಬೀಳಬೀಳಬಹುದು. ಕೋಪವು ಮುಖ ಭಂಗಿಯಲ್ಲಿ ಕಾಣಿಸಬಹುದು, ಅವರವರ ವಯೋಗುಣ ಮತ್ತು ಮನೋಭಾವಗಳನ್ನು ಅನುಸರಿಸಿ ಭಿನ್ನರೀತಿಯಲ್ಲಿ ವ್ಯಕ್ತವಾಗಬಹುದು. ಆಲೋಚಿಸುವಾಗ ಮಾತು ಹೊರಮೂಡುವಂತೆ ಭಾಸವಾಗುವುದು. ಏಕೆಂದರೆ ನಮ್ಮ ಆಲೋಚನೆಯಲ್ಲಿ ಪದಗಳು ಮಾತ್ರ ಪಾತ್ರ ವಹಿಸುತ್ತವೆ. ಎಲ್ಲ ಮಾನಸಿಕ ವ್ಯಾಪಾರಗಳಂತೆ ಆಲೋಚನೆಗೂ ಒಂದು ಸನ್ನಿವೇಶದ ಪ್ರಚೋದನೆ ಅಗತ್ಯ, ಇತರರು ಆಲೋಚಿಸಿ ತೀರ್ಮಾನಿಸಿರುವ ಅಂಶವನ್ನು ಅರಿತಾಗ, ಅದು

ತಾವು ನಿರ್ಧರಿಸಿದ್ದೆಂದು ಕೆಲವರು ಭಾವಿಸುವುದುಂಟು. ಅದು ಆಲೋಚನೆಯೆ ಅಲ್ಲ ಸಲಹೆ ಮಾತ್ರ.

ನಮಗೆ ಸಮಸ್ಯೆಯೊಂದು ಎದುರು ಬಂದಾಗ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಉದ್ದೇಶ ಪೂರ್ವಕವಾಗಿ ಯತ್ನಿಸುತ್ತೇವೆ. ನಮಗೆ ಗೊತ್ತಿರುವ ಹಳೆಯ ಅನುಭವಗಳ ಆಧಾರದ ಮೇಲೆ ಆಲೋಚನೆ ನಡೆಸಿ, ಹೊಸ ವಿಷಯಗಳನ್ನು ತಿಳಿದುಕೊಂಡು ಸಮಸ್ಯೆಗಳನ್ನು ಬಿಡಿಸುತ್ತೇವೆ. ಇಂಥ ಆಲೋಚನೆಯನ್ನು ಉದ್ದೇಶ ಪೂರ್ವಕ ಅಥವಾ ಸಮಸ್ಯಾ ಪರಿಹಾರಕ ಆಲೋಚನೆ ಎಂದು ಕರೆಯುವರು. ಪೂರ್ವ ಅನುಭವಗಳ ಆಧಾರದ ಮೇಲೆ ಆಲೋಚಿಸಿದರೂ ಕುರುಡರಂತೆ ತೀರ್ಮಾನಕ್ಕೆ ಬರುವಂತಿಲ್ಲ, ಸಂಬಂಧ ಕಲ್ಪಿಸುವಾಗ ಸರಿಯೆ ತಪ್ಪೆ ಎಂದು ಹೆಜ್ಜೆ ಹೆಜ್ಜೆಗೂ ವಿವೇಚಿಸಿಕೊಂಡು ಮುಂದುವರಿಯಬೇಕು. ಆದ್ದರಿಂದ ಇಂಥ ಆಲೋಚನೆಯನ್ನು ವಿವೇಚನೆ ಎಂದು ಕರೆಯುವುದುಂಟು. ಆತುರವಾಗಿ ತೀರ್ಮಾನಕ್ಕೆ ಬಂದರೆ ಅದು ನಿರ್ದಿಷ್ಟ ಆಲೋಚನೆ ಎನಿಸುವುದಿಲ್ಲ. ಆತುರಗಾರರಿಗೆ ಬುದ್ಧಿ ಮಟ್ಟ, ಎಂಬ ಗಾದೆ ಮಾತು ನೂರಕ್ಕೆ ನೂರು ಸತ್ಯವೆನಿಸಿದೆ.

ಆತುರದಿಂದ ತೀರ್ಪು ಮಾಡುವಾಗ ಸತ್ಯಕ್ಕೆ ದೂರವಾಗಿ ವರ್ತಿಸಿ ವ್ಯಕ್ತಿ ಬಗೆ ಬಗೆಯ ಕಷ್ಟಗಳಿಗೆ ಗುರಿಯಾಗುತ್ತಾನೆ.

— ಶಾರದರಾಜಶೇಖರ್, 847, 4 ನೇ ಮೈನ್, ವಿಜಯನಗರ, ಬೆಂಗಳೂರು-40

ಸ್ಥಾಪನೆ: 1943 ತಂತಿ: 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62 ಕೇಂದ್ರ ಕಛೇರಿ: { 72866 70204
ಸಿ.ಎಸ್.ಟಿ. 73656288

ಮಿನಿ ಬಜಾರ್: 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)
ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ: ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ: ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶೀ ವೈ. ಟಿ. ಮಹದೇವಪ್ಪನವರು
5) ಶೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ ಉಪನಿಬಧಂಕರ ಕಛೇರಿ, ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು ಪ್ರಧಾನ ವ್ಯವಸ್ಥಾಪಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ,